# ನಮ್ಮ ಮಾನಸ

ಸಂಪುಟ : 4 ಅಕ್ಟೋಬರ್ 2010 ಸಂಚಿಕೆ : 6



ನಿರಂತರವಾಗಿ ಮಾನಗೆಟ್ಟ ಬದುಕಷ್ಟೆ ನಮ್ಮ ಪಾಲಿಗೇಕೆ?
ಸ್ವಾತಂತ್ರ್ಯ, ಸಮಾನತೆ, ಭ್ರಾತೃತ್ವ ನಮ್ಮ ಹಕ್ಕಾಗಲಿ.

# ಡೆಂಗಿ ಜ್ವರ ತಡೆಗಟ್ಟುವ ಬಗ್ಗೆ ಮುಂಜಾಗ್ರತೆ ಕ್ರಮಗಳು

### ಡೆಂಗಿ ಜ್ವರ ಎಂದರೇನು?

ಡೆಂಗಿಜ್ವರವು ಡೆಂಗಿ ವೈರಸ್‌ನಿಂದ ಉಂಟಾಗುವ ಕಾಯಿಲೆ. ಈ ಕಾಯಿಲೆಯು ಸೋಂಕು ಹೊಂದಿದ ಈಡಿಸ್ ಈಜಿಪ್ಟೈ ಎಂಬ ಸೊಳ್ಳೆಯ ಕಚ್ಚುವಿಕೆಯಿಂದ ಒಬ್ಬರಿಂದ ಒಬ್ಬರಿಗೆ ಹರಡುತ್ತದೆ.

### ಈ ರೋಗದ ಮುಖ್ಯ ಲಕ್ಷಣಗಳು

ಇದ್ದಕ್ಕಿದ್ದಂತೆ ತೀವ್ರಜ್ವರ, ವಿಪರೀತ ತಲೆನೋವು, ಕಣ್ಣುಗಳ ಹಿಂಭಾಗದಲ್ಲಿ ನೋವು, ಮಾಂಸಖಂಡ ಮತ್ತು ಕೀಲುಗಳಲ್ಲಿ ನೋವು ಕಾಣಿಸಿಕೊಳ್ಳುವುದು ಈ ರೋಗದ ಲಕ್ಷಣ. ಹಲವು ಬಾರಿ ಮೂಗು, ಬಾಯಿ ಮತ್ತು ವಸಡುಗಳಲ್ಲಿ ರಕ್ತಸ್ರಾವದ ಚಿಹ್ನೆಗಳು ಕಂಡುಬರುತ್ತವೆ. ಈ ಲಕ್ಷಣಗಳು ಕಂಡುಬಂದಲ್ಲಿ ತಕ್ಷಣ ಹತ್ತಿರದ ಸರ್ಕಾರಿ ಆಸ್ಪತ್ರೆಗೆ ದಾಖಲಿಸಿ, ರಕ್ತಪರೀಕ್ಷೆ ಮಾಡಿಸಿ, ಸೂಕ್ತ ಚಿಕಿತ್ಸೆ ಪಡೆಯುವುದು.

### ಸಾರ್ವಜನಿಕರು ಡೆಂಗಿ ರೋಗವನ್ನು ತಡೆಗಟ್ಟಲು ತೆಗೆದುಕೊಳ್ಳಬೇಕಾದ ಮುನ್ನೆಚ್ಚರಿಕೆ ಕ್ರಮಗಳು

1. ಡೆಂಗಿ ಹರಡುವ ಈಜಿಪ್ಟ್ ಸೊಳ್ಳೆಗಳು ಮನೆಯಲ್ಲಿನ ನೀರು ಶೇಖರಿಸುವ ಸಿಮೆಂಟ್ ತೊಟ್ಟಿಗಳು, ಬ್ಯಾರೆಲ್‌ಗಳು, ಡ್ರಮ್‌ಗಳು, ಏರ್‌ಕೂಲರ್, ಹೂಕುಂಡದ ನೀರಿನ ಸಂಗ್ರಹಗಳು ಇತ್ಯಾದಿಗಳಲ್ಲಿ ಉತ್ಪತ್ತಿಯಾಗುವುದರಿಂದ ಇವುಗಳನ್ನು ವಾರಕ್ಕೊಮ್ಮೆ ಸಂಪೂರ್ಣವಾಗಿ ಶುಚಿಗೊಳಿಸಿ, ಯಾವಾಗಲೂ ಭದ್ರವಾದ ಮುಚ್ಚಳಿಕೆಯಿಂದ ಮುಚ್ಚಿ ಸೊಳ್ಳೆ ಉತ್ಪತ್ತಿಯಾಗದಂತೆ ಎಚ್ಚರವಹಿಸಿ.
2. ಬಯಲಲ್ಲಿ ಪೈರು, ಎಳನೀರನ ಚಿಪ್ಪು ಮತ್ತು ತ್ಯಾಜ್ಯ ವಸ್ತುಗಳಲ್ಲಿ ನೀರು ಸಂಗ್ರಹವಾಗುವಂತೆ ಸೂಕ್ತ ವಿಲೇವಾರಿ ಮಾಡುವುದು ಅಥವಾ ನಾಶಗೊಳಿಸುವುದು.
3. ಈ ರೋಗ ಹರಡುವ ಸೊಳ್ಳೆಗಳು ಹಗಲಲ್ಲಿ ಕಚ್ಚುವುದರಿಂದ ಸೊಳ್ಳೆ ಕಡಿತದಿಂದ ಪಾರಾಗಲು ಮಕ್ಕಳು, ವಿಶ್ರಾಂತಿ ಪಡೆಯುವ ವಯೋವೃದ್ಧರು, ಕಾಯಿಲೆಯಿಂದ ನರಳುವವರು ತಪ್ಪದೇ ಸೊಳ್ಳೆ ಪರದೆಯನ್ನು ಉಪಯೋಗಿಸುವುದು ಹಾಗೂ ಇತರೆ ಸೊಳ್ಳೆ ನಿರೋಧಕಗಳನ್ನು ಬಳಸುವುದು. ಹೀಗೆ ಮಾಡುವುದರಿಂದ ಈ ರೋಗವನ್ನು ತಡೆಗಟ್ಟುವುದು ಸುಲಭ.

*ನಿಮ್ಮ ಮನೆಯ ಒಳಗೆ ಹಾಗೂ ಮನೆಯ ಸುತ್ತಮುತ್ತ*
*ಸೊಳ್ಳೆ ಉತ್ಪತ್ತಿಯನ್ನು ತಡೆಗಟ್ಟಿ ಡೆಂಗಿ ಜ್ವರ ನಿಯಂತ್ರಿಸಿ*


ಕರ್ನಾಟಕ ವಾರ್ತೆ

ನಮ್ಮ ಮಾನಸ

ಅಕ್ಟೋಬರ್ 2010
ಸಂಪುಟ : 4 ಸಂಚಿಕೆ : 6

*Editor, Printer and Publisher*
***Rajeshwari H.S.,***
*No. 114/5, 9th Cross, 2nd Main*
*Chamarajpet, Bangalore - 560 018.*
*Mobile : 9449345698*

*Printed at*
***ILA Mudrana***
*No. 36, 40 Ft. Road, Raghavanagara,*
*New Timberyard Layout*
*Bangalore-26.*
*✆ : 26757159*



*ಚಂದಾ ವಿವರ*

| | |
|---|---|
| ಬಿಡಿಪ್ರತಿ | 8–00 ರೂ. |
| ವಾರ್ಷಿಕ ಚಂದಾ (ವಿಶೇಷ ಸಂಚಿಕೆಯೊಂದಿಗೆ) | 100–00 ರೂ. |
| ಸಂಸ್ಥೆಗಳಿಗೆ | 150–00 ರೂ. |

ನಮ್ಮ ಮಾನಸ
114/5, 9ನೇ ತಿರುವು, 2ನೇ ಮುಖ್ಯರಸ್ತೆ,
ಚಾಮರಾಜಪೇಟೆ, ಬೆಂಗಳೂರು – 560 018

*ಚಂದಾಹಣವನ್ನು ಈ ವಿಳಾಸಕ್ಕೆ ಚೆಕ್ ಅಥವಾ ಡಿ.ಡಿ. ಮೂಲಕ ಕಳಿಸಬಹುದು*

– – –

*ಮೈಸೂರಿನಲ್ಲಿ ಓದುಗರು ಪ್ರತಿಗಳಿಗೆ ಹಾಗೂ ಚಂದಾ ನವೀಕರಣಕ್ಕೆ ಸಂಪರ್ಕಿಸಿ*
ವೆಂ. ವನಜ
*2329, 12ನೇ ಮೈನ್, 2ನೇ ಹಂತ, ವಿಜಯನಗರ, ಮೈಸೂರು – 570 017*

ಪ್ರಾರಂಭ : 'ಮಾನುಷಿ' (1985ರಲ್ಲಿ),
ಅನಂತರ 'ಮಾನಸ',
ಈಗ 'ನಮ್ಮ ಮಾನಸ'



ಸಂಪಾದಕೀಯ

# ವಿವಾಹ ವ್ಯವಸ್ಥೆಯ ಅಭದ್ರತೆ!

ಮದುವೆಗಳು ಸ್ವರ್ಗದಲ್ಲಿ ನಡೆಯುತ್ತವೆ ಎನ್ನಲಾಗುತ್ತದೆ. ಆದರೆ ನಮಗೆ ಸ್ಪಷ್ಟವಾಗಿರುವ ವಿಚಾರವೆಂದರೆ ವಿವಾಹ–ವಿಚ್ಛೇದನ ಎರಡೂ ಈ ಭೂಮಿಯ ಮೇಲೆಯೇ ನಡೆಯುತ್ತದೆಯೆಂಬುದು. 'ವಿವಾಹ' ಸಂಸ್ಥೆ ಭದ್ರ ಅಲ್ಲ ಎನ್ನುವ ಆತಂಕ ಇಂದು ಪ್ರತಿಯೊಬ್ಬ ಯುವಕ–ಯುವತಿಯರಲ್ಲೂ ಕಾಡುತ್ತಿರುವ ವಿಚಾರ. ಸುತ್ತ–ಮುತ್ತ ನಡೆಯುತ್ತಿರುವ ಕೊಲೆಗಳು, ಮಾಧ್ಯಮಗಳು ಬಿತ್ತರಿಸುತ್ತಿರುವ ಹಿಂಸಾತ್ಮಕ ದಾಂಪತ್ಯದ ಚಿತ್ರಗಳು, ಚಿತ್ರ ತಾರೆಯರು ಟಿ.ವಿ. ಮಾಧ್ಯಮದಲ್ಲಿ ನಡೆಸುವ ಕುಟುಂಬದ ಜೊತೆಗಿನ ಸಮಾಲೋಚನೆಗಳು (ಕೌನ್ಸಿಲಿಂಗ್), ಮನೆಯ ಅಕ್ಕ–ಪಕ್ಕದವರು ತರುವ ಅವರ ಮಕ್ಕಳ–ಸೊಸೆಯಂದಿರ ಚಿತ್ರಗಳು, ಮೆಟ್ರೋಪಾಲಿಟನ್ ನಗರಗಳಲ್ಲಿ ಹೆಚ್ಚಾಗುತ್ತಿರುವ ಲಿವಿಂಗ್ ಟುಗೆದರ್ ಸಂಬಂಧಗಳು–ಹೀಗೆ ಹತ್ತು ಹಲವಾರು ವಿಚಾರಗಳು 'ಮದುವೆ'ಯ ಸುಭದ್ರತೆಯ ಬಗ್ಗೆ ಯುವಕ–ಯುವತಿಯರಲ್ಲಿರುವ ಅಭದ್ರತೆಯ ಭಾವವನ್ನು ಸೂಚಿಸುತ್ತವೆ. ಖಾಸಗೀಕರಣ, ಜಾಗತೀಕರಣ, ಸರಕೀಕರಣದ ಈ ಸಂದರ್ಭದಲ್ಲಿ, ಕಾಂಚಾಣವೇ ಬದುಕಿಗೆ ಎಲ್ಲಾ ಎನ್ನುವ ಮನೋಭಾವದ ಹಿನ್ನೆಲೆಯಲ್ಲಿ 'ಮದುವೆ' ಎಂಬ ಸಂಬಂಧ ಕೂಡಾ ಸರಳೀಕರಣಕ್ಕೆ ಇಳಿದಿರುವ ಆದರೆ ವೈಭವಯುತವಾದ ವಿಚಾರವಾಗಿದೆ. ಬದುಕು ಹೆಣ್ಣು, ಗಂಡು ಹಂಚಿಕೊಳ್ಳಬೇಕಾದ ಮಾನಸಿಕ ಸಿದ್ಧತೆ ಎನ್ನುವ ವಿಚಾರ ಮರೆಯಾಗಿ ಎರೆಡು ಕುಟುಂಬಗಳ ಗೌರವ, ಘನತೆಗೆ ಖರ್ಚು ಮಾಡುವ ದುಬಾರಿ ವೇದಿಕೆ 'ವಿವಾಹ' ಎಂಬಂತಾಗಿದೆ. ಹೀಗೆ ನಡೆಯುವ ವಿವಾಹಗಳೂ ಕೊಲೆಯಂತಹ ಪ್ರಕರಣದಲ್ಲಿ ಕೊನೆಗೊಳ್ಳುತ್ತಿರುವುದಂತೂ ಎದೆ ಧಸಕ್ಕೆನಿಸುವ ವಿಚಾರವಾಗಿ ಹಾಗೆಯೇ ಕ್ಷಣಿಕತೆಯ ಮೋಹದಲ್ಲಿ ಪ್ರೀತಿ, ಪ್ರೇಮ ಎಂದು ಎಲ್ಲಿಯೋ ಓಡಿಹೋಗಿ ಮದುವೆಯಾದ ಯುವಕ–ಯುವತಿಯರ ಬದುಕಿನ ವೈಪರೀತ್ಯದ ಘಟನೆಗಳೂ ಸಹ 'ವಿವಾಹ' ಸಂಸ್ಥೆಯ ಬಗೆಗಿನ ಸುಭದ್ರತೆಯ ಬಗ್ಗೆ ಹಲವಾರು ಪ್ರಶ್ನೆಗಳನ್ನು ಎತ್ತುತ್ತಿವೆ.

ಅನೇಕಾನೇಕ ಕಾರಣಗಳಿಂದಾಗಿ ಇವತ್ತು ಕುಟುಂಬದ ಕಲ್ಪನೆ ಛಿದ್ರವಾಗುತ್ತಿರುವುದನ್ನು ವಾಸ್ತವದಲ್ಲಿ ನಾವು ಗಮನಿಸಬಹುದಾಗಿದೆ. ಖಾಸಗೀಕರಣ, ಜಾಗತೀಕರಣದ ಹುನ್ನಾರಗಳು ಹುಟ್ಟು ಹಾಕುತ್ತಿರುವ ಸವಾಲುಗಳನ್ನು ಎದುರಿಸಲು ಹಲವಾರು ಕ್ಷೇತ್ರಗಳಲ್ಲಿ ಕೆಲಸ ಮಾಡುವ ಮಹಿಳೆಯರು ಉದ್ಯೋಗ, ಕುಟುಂಬದ ನಿರೀಕ್ಷೆಗಳನ್ನು ಸಮಾನವಾಗಿ ಕಾಪಾಡಿಕೊಂಡು ಹೋಗಲಾರದೇ ಇರುವ ಸಂದರ್ಭ ವಿವಾಹ ವಿಚ್ಛೇದನಕ್ಕೆ ದಾರಿ ಮಾಡಿಕೊಡುತ್ತಿದೆ. ಸಂಬಂಧಗಳ ಬಗೆಗಿನ ಅನುಮಾನ, ಮಹಿಳೆಯ ಸ್ವಾತಂತ್ರ್ಯದ ಪರಿಕಲ್ಪನೆಗೆ ಇಂಬುಕೊಡಲಾಗದ ಪಿತೃ ಪ್ರಧಾನತೆ, ಊಳಿಗಮಾನ್ಯ ವ್ಯವಸ್ಥೆಯ ಮನೋಭಾವಗಳು, ಒಟ್ಟು ಕುಟುಂಬದಲ್ಲಿ ಬದುಕನ್ನು ಹಂಚಿಕೊಳ್ಳಲಿಕ್ಕೆ ಇಚ್ಛೆ ಪಡದ ಮಹಿಳೆಯರ ಸ್ವಾತಂತ್ರ್ಯದ ಕಲ್ಪನೆ/ಅಪಕಲ್ಪನೆ, ಸರಕೀಕರಣದ ಅಮಲುಗಳು–ಹೀಗೆ ಹತ್ತು ಹಲವಾರು ವಿಷಯಗಳಿಂದಾಗಿ 'ಕುಟುಂಬ'ದ ಚೌಕಟ್ಟು ಒಡೆಯ ತೊಡಗಿರುವುದು ಸ್ಪಷ್ಟವಾಗಿದೆ. ಇಂತಹ ಸಂದರ್ಭದಲ್ಲಿ ಒಂದೇ ಸೂರಿನಡಿ ಬದುಕಲಾಗದೇ, ಬಿಡಲಾಗದೇ ಬೇರೆಬೇರೆ ಬದುಕುವ ಗಂಡ–ಹೆಂಡಿರಷ್ಟೋ ಅಥವಾ ಬಯ್ದುಕೊಂಡೇ ಅನಿವಾರ್ಯವೆಂಬಂತೆ ವಿವಾಹಸಂಸ್ಥೆಯ ನೊಗವನ್ನು ಕೊರಳಿಗೆ ತಗಲಿಸಿಕೊಂಡವರೆಷ್ಟೋ? ವಿಚ್ಛೇದನವಾದರೆ ಬದುಕಿನ ಆಯ್ಕೆ ಇರದೇ ಇರುವುದರಿಂದ ಹಾಗೋ ಹೀಗೋ ಒಪ್ಪಂದ ಮಾಡಿಕೊಂಡು ಬದುಕುವವರೆಷ್ಟೋ? ಮಕ್ಕಳಿಗಾಗಿ ಎಂಬಂತೆ ಒಂದು ಸೂರಿನಡಿ ಬದುಕುವವರೆಷ್ಟೋ?

ಈ ಸಂದರ್ಭದಲ್ಲಿ ಲಾ ಕಮಿಶನ್ ಆಫ್ ಇಂಡಿಯ ವಿವಾಹಸಂಸ್ಥೆ ಹಾಗೂ ವಿಚ್ಛೇದನದ ಬಗ್ಗೆ ಒಂದು ಅಧ್ಯಯನ ಮಾಡಿ 2009ರ ಮಾರ್ಚ್‌ನಲ್ಲಿ ಒಂದು ವರದಿಯನ್ನು ನೀಡಿದೆ. **ಈ ವರದಿಯಲ್ಲಿ 1955ರ ಹಿಂದೂವಿವಾಹ ಕಾಯ್ದೆ ಮತ್ತು 1954ರ ವಿಶೇಷ ವಿವಾಹ ಕಾಯ್ದೆಯಲ್ಲಿ ಸುಧಾರಣೆ ತಂದು ಸರಿಪಡಿಸಲಾಗದೇ ಮುರಿದು ಹೋಗಿರುವ ವಿವಾಹ ಸಂಬಂಧವನ್ನು ವಿವಾಹ ವಿಚ್ಛೇದನ ನೀಡುವಲ್ಲಿ ಒಂದು ಆಧಾರವಾಗಿ ಪರಿಗಣಿಸಬೇಕೆಂದು** ಇವರು ಸಲಹೆ ಇತ್ತಿದ್ದರು.

ಫೆಬ್ರವರಿ 2009ರಲ್ಲಿ ವಿಷ್ಣುಶರ್ಮದತ್ತ ಹಾಗೂ ಮಂಜುದತ್ತ ಶರ್ಮರು ಸರಿಪಡಿಸಲಾಗದೇ ಮುರಿದುಬಿದ್ದ ತಮ್ಮ ಸಂಬಂಧವನ್ನು ಆಧಾರವಾಗಿಟ್ಟುಕೊಂಡೇ ತಮಗೆ ವಿವಾಹ ವಿಚ್ಛೇದನ ನೀಡಬೇಕೆಂದು ಬೇಡಿಕೆ ಇತ್ತಿದ್ದರು. ಇತ್ತೀಚಿನ ಅಂದರೆ ಮೇ 10, 2010ರಲ್ಲಿ ನೀತಿ ಮಾಲ್ವಿಯಾ ಹಾಗೂ ರಾಕೇಶ್ ಮಾಲ್ವಿಯಾರ ಪ್ರಕರಣದಲ್ಲಿ ಇಬ್ಬರಿಗೂ ವಿವಾಹವಿಚ್ಛೇದನಕ್ಕೆ ಸಮ್ಮತಿಯಿತ್ತು. ಹಾಗಾಗಿ ಆರುತಿಂಗಳು ಕಾಯುವ ಸಮಯವನ್ನು ಬದಿಗಿಟ್ಟು ವಿಚ್ಛೇದನ ನೀಡಬೇಕೆಂಬುದು ಇವರ ಬೇಡಿಕೆಯಾಗಿತ್ತು. ಇದಕ್ಕಾಗಿ ಸುಪ್ರೀಂ ಕೋರ್ಟ್ ಸಂವಿಧಾನದ 148ನೇ ಕಲಂನ ವಿಶೇಷ ಅಧಿಕಾರ ಬಳಸಿಕೊಳ್ಳಬೇಕಿತ್ತು. ಇಲ್ಲಿಯೂ ಸರಿಪಡಿಸಲಾಗದೇ ಮುರಿದು ಹೋಗಿರುವ ಸಂಬಂಧವನ್ನೇ ಆಧಾರವಾಗಿಟ್ಟುಕೊಳ್ಳಬೇಕಾದುದರಿಂದ ತೀರ್ಪು ನೀಡಲಾಗಲಿಲ್ಲ. ಈ ಅಂಶದ ಆಧಾರದ ಮೇಲೆ ವಿವಾಹ ವಿಚ್ಛೇದನ ನೀಡಿದರೆ ಅದು 1955ರ ಹಿಂದೂ ವಿವಾಹ ಕಾಯಿದೆಯನ್ನು ಸುಧಾರಣೆಮಾಡಿದ ಹಾಗೆ ಆಗುತ್ತದೆ ಎಂದು ಎರಡೂ ಪ್ರಕರಣದಲ್ಲಿ ನ್ಯಾಯಾಲಯವು ವಾದ ಮಂಡಿಸಿತ್ತು. ಹಾಗೆಯೇ ಸುಧಾರಣೆ ಮಾಡುವುದು ಸಂಸತ್ತಿಗೆ ಮಾತ್ರ ಸಾಧ್ಯ ಎನ್ನುವ ಅಂಶದ ಮೇಲೆ ಕೂಡಾ ಬೆಳಕು ಚೆಲ್ಲಿತ್ತು.

ಆದರೆ 2006ರಲ್ಲಿ ನವೀನ್ ಕೊಯ್ಲಿ ಹಾಗೂ ನೀಲು ಕೊಯ್ಲಿಯವರ ಪ್ರಕರಣದಲ್ಲಿ ಸರಿಪಡಿಸಲಾಗದೇ ಮುರಿದು ಬಿದ್ದ ವೈವಾಹಿಕ ಸಂಬಂಧದ ಆಧಾರದ ಮೇಲೆಯೇ ವಿವಾಹ ವಿಚ್ಛೇದನ ನೀಡಲಾಗಿತ್ತು. ಈ ಅಂಶ ಅಥವಾ ಈ ಆಧಾರದ ಮೇಲೆ ವಿವಾಹ ವಿಚ್ಛೇದನ ನೀಡಬಹುದೆಂಬ ವಿಚಾರ ಹಿಂದೂ ಕಾಯ್ದೆಯಲ್ಲಿ ಇಲ್ಲ. ಆದರೆ ಸುಪ್ರೀಂ ಕೋರ್ಟ್ ಸಂವಿಧಾನದ 142ನೇ ಕಲಂನಲ್ಲಿ ನೀಡಿರುವ ವಿಶೇಷ ಅಧಿಕಾರದ ಹಿನ್ನೆಲೆಯಲ್ಲಿ ಸರಿಕಂಡ ಪ್ರಕರಣದಲ್ಲಿ, ಸರಿಪಡಿಸಲಾಗದೇ ಮುರಿದುಬಿದ್ದ ವೈವಾಹಿಕ ಸಂಬಂಧದ ಆಧಾರದ ಮೇಲೆ ತೀರ್ಪು ನೀಡಲಾಗಿತ್ತು. ಅಂದರೆ ಸುಪ್ರೀಂ ಕೋರ್ಟ್‌ನ ಭಿನ್ನ ಭಿನ್ನ ಬೆಂಚುಗಳು ಭಿನ್ನ ಭಿನ್ನವಾದ ನಿಲುವುಗಳನ್ನು ಹೊಂದಿರುವುದನ್ನು ನಾವು ಗಮನಿಸಬಹುದಾಗಿದೆ. ಕಳೆದ 5 ವರ್ಷಗಳಲ್ಲಿ ಈ ವಿವಾದಾತ್ಮಕ ವಿಚಾರದ ಬಗ್ಗೆ ನ್ಯಾಯಾಲಯಗಳಲ್ಲಿಯೇ ಭಿನ್ನ ಭಿನ್ನವಾದ ಧೋರಣೆಗಳಿವೆ. ಹಾಗಾಗಿಯೇ ಲಾ ಕಮಿಶನ್ ಆಫ್ ಇಂಡಿಯಾ ಮಾರ್ಚ್ 2009ರಲ್ಲಿ ಈ ಬಗ್ಗೆ ಅಧ್ಯಯನ ನಡೆಸಿ ವರದಿ ಸಲ್ಲಿಸಿತ್ತು. ಇದಾದ ಒಂದು ವರುಷದ ನಂತರದಲ್ಲಿ ಅಂದರೆ ಜೂನ್ 2010ರಲ್ಲಿ ಕೇಂದ್ರದಲ್ಲಿ ಸಂಸತ್ತು ಈ ಮಸೂದೆಯನ್ನು ಮಂಡಿಸುವುದಕ್ಕೆ ಅಂಗೀಕರಿಸಿದೆ. ಬರುವ ಮಾನ್‌ಸೂನ್ ಅಧಿವೇಶನದಲ್ಲಿ ವಿವಾಹ ಕಾಯ್ದೆಗಳ ಸುಧಾರಣೆಗೆ–ಅಂದರೆ ಸರಿಪಡಿಸಲಾಗದೇ ಮುರಿದುಬಿದ್ದ ವಿವಾಹವನ್ನು–ವಿಚ್ಛೇದನದಲ್ಲಿ ಆಧಾರವಾಗಿ ಇಟ್ಟುಕೊಳ್ಳುವ ಕಾಯಿದೆಯನ್ನು ವಿವಾಹ ಕಾಯ್ದೆಗಳ ಅಡಿ ತರುವುದನ್ನು ಅಂಗೀಕರಿಸಲಾಗಿದೆ.

ಲಾ ಕಮಿಶನ್ ಇದರ ಜೊತೆಗೆ ಮತ್ತೊಂದು ವಿಚಾರವನ್ನು ಕೂಡಾ ಸ್ಪಷ್ಟಪಡಿಸಿದೆ. ನ್ಯಾಯಾಲಯವು ಮುರಿದು ಬಿದ್ದ ಸಂಬಂಧ ಸರಿಪಡಿಸಲು ಸಾಧ್ಯವಾಗದೇ ಇರುವಂತಹದು ಎಂಬುದನ್ನು ಮೊದಲು ಸ್ಪಷ್ಟಪಡಿಸಿಕೊಳ್ಳಬೇಕು. ವಿಚ್ಛೇದನ ನೀಡುವಾಗ ಸಂಬಂಧಪಟ್ಟ ವ್ಯಕ್ತಿ ಹಾಗೂ ಮಕ್ಕಳಿಗೆ ಹಣಕಾಸಿನ ವ್ಯವಸ್ಥೆ ಮಾಡಲಾಗಿದೆಯೇ ಎಂಬುದನ್ನೂ ಕೂಡಾ ಅವಲೋಕಿಸಿ, ಪರೀಕ್ಷಿಸಿ ದೃಢಪಡಿಸಿಕೊಂಡು ತೀರ್ಮಾನ ನೀಡಬೇಕಾಗುತ್ತದೆ. ಈ ಕಾಯಿದೆಯನ್ನು ದುರುಪಯೋಗಪಡಿಸಿಕೊಳ್ಳಲು ಸಾಧ್ಯವಾಗದಂತಹ ನಿಯಮಗಳ ಕಾನೂನಿನ ಚೌಕಟ್ಟು ಸಹ ಈ ಕಾಯ್ದೆಗೆ ಇದ್ದರೆ ಮಾತ್ರ ಯಾರೂ ಇದನ್ನು ದುರುಪಯೋಗಪಡಿಸಿಕೊಳ್ಳಲು ಸಾಧ್ಯವಿಲ್ಲವಾಗುತ್ತದೆ, ಹಾಗೂ ವಿವಾಹ ವಿಚ್ಛೇದನ ಪ್ರಕ್ರಿಯೆ ಕೂಡಾ ಒಂದು ಶಾಂತಿಯುತ ವಿಚಾರವಾಗಿ ಕಾಣಿಸಿಕೊಳ್ಳಬಹುದಾಗಿದೆ.

* * *

ಈಚೆಗೆ ಸಾವುಗಳ ಸರಮಾಲೆಯೇ ಕಣ್ಣೆದುರು ನರ್ತಿಸುತ್ತಿದೆ. ರಂಗಭೂಮಿ, ಸಾಹಿತ್ಯ, ವಿಮರ್ಶೆ, ಚಲನಚಿತ್ರ ಕ್ಷೇತ್ರಗಳಲ್ಲಂತೂ ಅಮೂಲ್ಯರತ್ನಗಳು ಕೈಜಾರುತ್ತಿವೆ. ನಟಿ, ನಿರ್ದೇಶಕಿ, ಬರಹಗಾರ್ತಿ ಎಲ್ಲವೂ ಆಗಿದ್ದ ವೈಶಾಲಿ ಕಾಸರವಳ್ಳಿಯವರು ಚಲನಚಿತ್ರ–ಕಿರುತೆರೆಯಲ್ಲಿ ಹೊಸದನ್ನು ಸಾಧಿಸಿದವರು, ಸ್ತ್ರೀಪರ ನಿಲುವುಗಳನ್ನು ಪ್ರತಿಪಾದಿಸಿದವರು. ಇದೀಗ ಆಕೆಯನ್ನೂ ಸಾಂಸ್ಕೃತಿಕಲೋಕ ಕಳೆದುಕೊಂಡಿತು. ಅನುಪಮ ಕಲಾವಿದೆ ವೈಶಾಲಿ ಅವರ ಆತ್ಮಕ್ಕೆ ಶಾಂತಿ ಕೋರುತ್ತದೆ 'ನಮ್ಮ ಮಾನಸ' ಬಳಗ.

ಯಾವುದೇ ಪತ್ರಿಕೆಯ ಆರಂಭದ ಹಿಂದೆ ಒಂದು ಗಂಭೀರವಾದ ತುರ್ತು ಇದ್ದೇ ಇರುತ್ತದೆ. ಅದರಂತೆ ಸ್ತ್ರೀ ಜಾಗೃತಿ, ಸ್ತ್ರೀ ಶಿಕ್ಷಣವೂ ಸಹ ಸ್ವಾತಂತ್ರ್ಯ ಪೂರ್ವದ ತುರ್ತಾಗಿ ಪರಿಣಮಿಸಿದುದರಿಂದ ಕೆಲವು ಪತ್ರಿಕೆಗಳು ಸ್ತ್ರೀ ಕುರಿತ ಬರಹಗಳನ್ನು ಪ್ರಕಟಿಸತೊಡಗಿದವು. ಜೊತೆಗೆ ಸ್ತ್ರೀ ಬರಹಗಳನ್ನು ಪ್ರೋತ್ಸಾಹಿಸುವ ನಿಟ್ಟಿನಲ್ಲೂ ಕೆಲವು ಪತ್ರಿಕೆಗಳು ಮಹತ್ವದ ಪಾತ್ರ ವಹಿಸಿವೆ.

**–ಡಾ. ಗೀತಾ ಪ್ರಸಾದ್**
*ಆಧುನಿಕ ಮಹಿಳಾ ಅಭಿವ್ಯಕ್ತಿ*
*(ಸ್ವಾತಂತ್ರ್ಯ ಪೂರ್ವ ಮಹಿಳಾ ಸಾಹಿತ್ಯೇತರ, ಬರಹ, ಸ್ವರೂಪ ಮತ್ತು ತಾಂತ್ರಿಕತೆ)*

## ಒಳಗಿನ ಪುಟಗಳಲ್ಲಿ....

# ಗಂಡು-ಹೆಣ್ಣಾದ ಬದುಕಿನ ಕಥನಗಳು

■ *ಚಂಪಾ*

**ಗಂಡು-ಹೆಣ್ಣು ಎಂಬ ಲಿಂಗಾಧಾರದ ಮೇಲೆ ಜಗತ್ತಿನ ಆಗು-ಹೋಗುಗಳನ್ನು ಹಾಗೂ ಲೈಂಗಿಕತೆಯನ್ನು ನಿರ್ಧರಿಸುವ, ವ್ಯಾಖ್ಯಾನಿಸುವ ಪ್ರಪಂಚದ ಗ್ರಹಿಕೆಗೆ ಕ್ವೀರ್ ಮೂವ್‌ಮೆಂಟ್‌ನ ಭಾಗವಾದ ಹಿಜರಾಗಳು ಬಲವಾದ ಒಂದು ಸವಾಲನ್ನು ಒಡ್ಡುತ್ತಿದ್ದಾರೆ. ಇತ್ತೀಚಿನ ದಿನಗಳಲ್ಲಿ ಪ್ರಕಟವಾಗುತ್ತಿರುವ ಇವರ ಆತ್ಮಕಥನಗಳು ಬದುಕಿನ ಮತ್ತೊಂದು ಮಗ್ಗುಲಿಗೆ, ವ್ಯಕ್ತಿಯ ಮತ್ತೊಂದು ಮುಖಕ್ಕೆ, ಗಂಡು-ಹೆಣ್ಣಿನ ನಡುವಿನ ಗಡಿಗಳಿಗೆ, ಲೈಂಗಿಕತೆಯ ನಂಬಿಕೆಗಳಿಗೆ, ನೈತಿಕತೆ/ಅನೈತಿಕತೆಯ ಇಬ್ಬಂದಿತನಕ್ಕೆ ನಮ್ಮನ್ನು ಬೆಚ್ಚಿಸಿ ನಮ್ಮ ಮನದ ಕದ ತಟ್ಟುತ್ತಿರುವುದಂತು ಸ್ಪಷ್ಟವಾಗಿದೆ. ರೇವತಿಯವರು 'ದಿ ಟ್ರುತ್ ಎಬೌಟ್ ಮಿ' ಅಥವಾ 'ಎ ಹಿಜ್ರಾ ಲೈಫ್ ಹಿಸ್ಟರಿ'ಯಿಂದ/ಲಿವಿಂಗ್ ಸ್ಮೈಲ್ ವಿದ್ಯಾ ಅವರು 'ನಾನು ಅವನಲ್ಲ.... ಅವಳು' ಎಂಬ ತಮ್ಮ ಬದುಕಿನ ಕಥನಗಳಿಂದ ನಾವರಿಯದ ಒಂದು ಬದುಕಿನ ಪ್ರಪಂಚವನ್ನು ನಮ್ಮ ಮುಂದೆ ಬಿಚ್ಚಿ ಇಟ್ಟಿದ್ದಾರೆ.**

ನೀವು ಟ್ರ್ಯಾಫಿಕ್ ಸಿಗ್ನಲ್‌ನಲ್ಲಿ ಆಟೋದಲ್ಲಿ ಕೂತಿರುತ್ತೀರಿ, ರಸ್ತೆಯಲ್ಲಿ ನಡೆಯುತ್ತಿರುತ್ತೀರಿ ಅಥವಾ ಕಾರೊಳಗೆ ಬೆಚ್ಚಗೆ ಡ್ರೈವ್ ಮಾಡುತ್ತಿರುತ್ತೀರಿ. ತಟ್ಟನೆ ಚಪ್ಪಾಳೆ ತಟ್ಟಿ ನಿಮ್ಮ ಗಮನ ಸೆಳೆಯುವ ಈ ಮಂದಿ ನಿಮ್ಮ ಮುಖದಲ್ಲಿ ಕಂಡೂ-ಕಾಣದ ವ್ಯಂಗ್ಯ ಹುಟ್ಟಿಸುತ್ತಾರೆ, ಮುಖದಲ್ಲಿ ತಿಳಿನಗೆ ತರಿಸುತ್ತಾರೆ, ಕಂಡೂ ಕಾಣದ ಹಾಗೆ ಮುಖ ತಿರುಗಿಸುತ್ತೀರಿ. ಮನಸ್ಸಿದ್ದರೆ ಒಂದೋ ಎರಡೋ ರೂ ಎಸೆದು ನಿಮ್ಮ ಪಾಡಿಗೆ ನೀವು ನಿಮ್ಮ ಪ್ರಪಂಚದ ಆಗು-ಹೋಗುಗಳೊಳಗೆ ಮುಳುಗಿಬಿಡುತ್ತೀರಿ. ಪಡ್ಡೆ ಹುಡುಗರ ಮನಸ್ಸಿನಲ್ಲಿ ಇವರ ದೇಹದ ಒಳಗೆ ಲೈಂಗಿಕ ಚಿಹ್ನೆ ಏನಿರಬಹುದೆಂಬ ಕುತೂಹಲ ಹುಟ್ಟಲಿಕ್ಕೂ ಸಾಕು. ಸಾಧಾರಣವಾಗಿ ನಿಮ್ಮ ಮನಸ್ಸಿನಲ್ಲಿ ನಂ 9 ಎಂದೋ, ಚಕ್ಕ ಎಂದೋ ಒಂದು ಭಾವ ಸುಳಿಯುತ್ತದೆ. ಈ ಭಾಷೆ ನಮ್ಮೆಲ್ಲರ ಮನದಲ್ಲಿ ಇಳಿದುಬಿಟ್ಟಿದೆ. ಇದಿಷ್ಟು ಮುಖ್ಯವಾಹಿನಿಯ ಜನರು ಹಿಜ್ರಾಗಳೊಂದಿಗೆ ಮುಖಾಮುಖಿಯಾಗುವ ಸನ್ನಿವೇಶಗಳು. ಹೀಗೆ ಕಾಣಿಸಿಕೊಂಡು ಹಾಗೆ ಹೋಗಿ ಬಿಡುವ ಈ ಹಿಜ್ರಾಗಳು ನಮ್ಮ 'ನಾರ್ಮಲ್' ಎನ್ನುವ ಬದುಕಿನ ಕಲ್ಪನೆಯನ್ನೇ ಬುಡಮೇಲು ಮಾಡಬಲ್ಲರು ಎಂಬುದು ನಮಗೆ ಅರ್ಥವಾಗುವುದು ರೇವತಿ ಹಾಗೂ ವಿದ್ಯಾರಂತಹವರ ಆತ್ಮಕಥನಗಳಿಂದ ಮಾತ್ರ. ಆಯ್ಕೆ ಸಾಧ್ಯವಾಗದೇ ಇರುವ ಅಥವಾ ಪ್ರಸ್ತುತ ಸಮಾಜದ ಮೌಲ್ಯಗಳಲ್ಲಿ ಸಾಧ್ಯವಾಗದಂತಿರುವ ಹಿಜ್ರಾಗಳ ಬದುಕಿನ ಚಿತ್ರಣಗಳು ನಮ್ಮಲ್ಲಿ ಒಂದು ದುಗುಡವನ್ನು ಹುಟ್ಟಿಸಬಹುದು. ಗಂಡು-ಹೆಣ್ಣು ಎಂಬ ಎರಡು ಸ್ಪಷ್ಟ ವಿಭಾಗಗಳನ್ನು ನೋಡಿರುವ ನಮಗೆ ಹಿಜ್ರಾ ಜನರ ಗಂಡಿನ ವೇಷದೊಳಗೆ ಬಂಧಿತವಾಗಿರುವ ಹೆಣ್ಣಿನ ಮನಸ್ಸಿನ ದುಗುಡ, ಆತಂಕಗಳು ಈ ಆತ್ಮಕಥನಗಳಲ್ಲಿ ಕಂಡುಬರುತ್ತವೆ. ನಮ್ಮ ಗ್ರಹಿಕೆಯ ಪೂರ್ವಾಗ್ರಹಪೀಡಿತ ನಿಲುವುಗಳನ್ನೂ ಸಹ ಈ ಕಥನಗಳು ಪ್ರಶ್ನಿಸುತ್ತಿವೆ.



ರೇವತಿ

ಲಿವಿಂಗ್ ಸ್ಮೈಲ್ ವಿದ್ಯಾ ಹಾಗೂ ರೇವತಿ ಇಬ್ಬರೂ ತಮಿಳುನಾಡಿನ ಮೂಲದವರೇ. ರೇವತಿಯವರ 'ಎ ಹಿಜ್ರಾ ಲೈಫ್ ಹಿಸ್ಟರಿ' ಓದಿದಾಗ ಲಂಕೇಶರು ಅನುವಾದಿಸಿದ ಬೋದಿಲೇರನ 'ಪಾಪದ ಹೂಗಳು' ಕವನ ಸಂಕಲನ ಜ್ಞಾಪಕಕ್ಕೆ ಬರುತ್ತದೆ. ಆಯ್ಕೆ ಸಾಧ್ಯವಾಗದ ಹಂತದಲ್ಲಿ ಪಾಪದ ಕೂಪದಲ್ಲಿಯೇ ಎಡವುತ್ತಾ, ತಡವುತ್ತಾ ಬದುಕಿದ ರೇವತಿಯವರು ನಾಮಕ್ಕಲ್ ಎಂಬ ಹಳ್ಳಿಯಲ್ಲಿನ ತಮ್ಮ ಬಾಲ್ಯದ ದಿನಗಳನ್ನು ಜ್ಞಾಪಿಸಿಕೊಳ್ಳುತ್ತಾರೆ. ಹೆಣ್ತನದ ಅಭಿವ್ಯಕ್ತಿಯ ಬಯಕೆ ತನ್ನಲ್ಲಿ ಎಷ್ಟು ಇತ್ತೆಂದರೆ ತಾಯಿ ಸತ್ತಾಗ ಚಿಕ್ಕವನಾಗಿದ್ದ ತಾನು ಯಾರಿಗೂ ಗೊತ್ತಾಗದ ಹಾಗೆ ಲಂಗ ಹಾಕಿಕೊಂಡು ಕುಣಿದದ್ದನ್ನು ವಿದ್ಯಾ ನೆನಪಿಸಿಕೊಳ್ಳುತ್ತಾರೆ. ಇಬ್ಬರೂ ಹೆಣ್ತನದ ಅಭಿವ್ಯಕ್ತಿಗಾಗಿ ಅಕ್ಕ-ತಂಗಿಯರ ಸ್ಕರ್ಟ್, ಬ್ಲೌಸ್ ಕದ್ದದ್ದನ್ನು ಜ್ಞಾಪಿಸಿಕೊಳ್ಳುತ್ತಾರೆ. ರೇವತಿ ದೇವಸ್ಥಾನದಲ್ಲಿ ಹೆಣ್ಣು ವೇಷ ತೊಟ್ಟುಕೊಂಡು ಮಾಡುವ ನೃತ್ಯ ಅವರ ಆತ್ಮಸಂತೃಪ್ತಿಗೆ ಕಾರಣವಾಗುತ್ತದೆ. ಹರಿಶ್ಚಂದ್ರ ಕಥೆಯ ಚಂದ್ರಮತಿಯ ಪಾತ್ರ ಮಾಡುವಾಗ ಕೂಡಾ ಈಕೆ ಹೆಣ್ತನದ ಸುಖವನ್ನು ಕಾಣುತ್ತಾಳೆ. ವಿದ್ಯಾ ಬದುಕಿನುದ್ದಕ್ಕೂ ರಂಗಭೂಮಿಯ ಸಂಬಂಧವನ್ನು ಒಂದು ಗೀಳಾಗಿಯೇ ಅಂಟಿಸಿಕೊಂಡು ಬಿಡುತ್ತಾರೆ. ಕಂಪ್ಯೂಟರ್ ಸೈನ್ಸ್‌ನಲ್ಲಿ ಪದವಿ ಪಡೆಯುವ ತನಕ ವಿದ್ಯಾ ತಮ್ಮೊಳಗಿನ ಗಂಡು-ಹೆಣ್ಣಿನ ದ್ವಂದ್ವವನ್ನು ಹಾಗೋ ಹೀಗೋ ಬಚ್ಚಿಟ್ಟುಕೊಂಡೇ ಬರುತ್ತಾರೆ. ಹೆಣ್ಣಾಗಲೇಬೇಕೆಂಬ ಭಾವ ರೌದ್ರ ಸ್ವರೂಪ ತಾಳಿದಾಗ ವಿದ್ಯಾ ತಮ್ಮ ಅಂತರಂಗದ ಅಳಲನ್ನು, ತಾನೊಬ್ಬ ಹಿಜ್ರಾ ಎಂಬುದನ್ನು, ಗಂಡಿನ ವೇಷದಲ್ಲಿರುವ ಹೆಣ್ಣು ಎಂಬುದನ್ನು ಸಾಹಿತ್ಯ, ರಂಗಭೂಮಿಯ ಗೆಳೆಯರೊಂದಿಗೆ ಹಂಚಿಕೊಳ್ಳುತ್ತಾರೆ. ಈ ಗೆಳೆಯರು ತಮ್ಮ ಬದುಕಿಗೆ ಬೆನ್ನೆಲುಬಾಗಿ ನಿಂತು ಆಶ್ವಾಸನೆ ಇತ್ತುದನ್ನೂ ಕೂಡಾ ವಿದ್ಯಾ ಪ್ರೀತಿಯಿಂದ ನೆನೆಯುತ್ತಾರೆ. ಪದವೀಧರೆಯಾದ ವಿದ್ಯಾರಲ್ಲಿ ಭಿಕ್ಷೆ ಬೇಡಿದ್ರೂ ಸರಿ, ತಾನು ಹೆಣ್ಣಾಗಿಯೇ ಬದುಕುತ್ತೇನೆಂಬ ಹಟ ಹುಟ್ಟಿದಾಗ 'ನಿರ್ವಾಣ'ಕ್ಕಾಗಿ ಈಕೆ 'ತನ್ನ ಸಮುದಾಯ'ದವರೊಡನೆ ಒಡನಾಟ ಬೆಳೆಸುತ್ತಾರೆ.

'ನಿರ್ವಾಣ'ಕ್ಕಾಗಿ ಅಂದರೆ ಆಪರೇಷನ್ ಮಾಡಿಸಿಕೊಳ್ಳುವ ಹಾಗೂ ಆನಂತರದ ಆರೈಕೆಗೆ ತಮ್ಮ ಸಮುದಾಯದವರೇ ಆಗುವುದು ಎಂಬುದು ಸದ್ಯದ ವಾಸ್ತವದಲ್ಲಿ ಹಿಜರಾಗಳಿಗೆ ಅನುಭವ ವೇದ್ಯವಾದ ಮಾತಾಗಿದೆ. ಯಾಕೆಂದರೆ ಭಾರತದಲ್ಲಿ ಯಾವ ಕುಟುಂಬಗಳೂ ಹಿಜ್ರಾಗಳನ್ನು ತಮ್ಮ ಮಕ್ಕಳು ಎಂದು ಒಪ್ಪಿಕೊಳ್ಳುವ ಸ್ಥಿತಿಯಲ್ಲಿಯೇ ಇಲ್ಲ. ಆಪರೇಷನ್ ನ್ಯಾಯ ಬದ್ಧವಾಗಿಲ್ಲ. ಕುಟುಂಬದವರು ಅವರ ಹೆಣ್ಣಿನ ಅಭಿವ್ಯಕ್ತಿಗೆ ಪ್ರಾಮುಖ್ಯತೆ ಕೊಟ್ಟು ಆಪರೇಷನ್ ಮಾಡಿಸುವ ಜವಾಬ್ದಾರಿ ಹೊರುವುದಂತೂ ಇನ್ನೂ ಕನಸಿನ ಮಾತಾಗಿದೆ. ಹಾಗಾಗಿ ಓದಿದವರೋ ಅಥವಾ ಓದದಿರುವವರೋ-ಹಿಜ್ರಾಗಳು ತಮ್ಮ ಸಮುದಾಯದ ನೆರವಿನಿಂದಲೇ ಈ 'ನಿರ್ವಾಣ' ಹೊಂದುತ್ತಿರುವುದನ್ನು ಕಾಣಬಹುದಾಗಿದೆ. ರೇವತಿಯವರ ಸಂಪರ್ಕಕ್ಕೆ ಬರುವ ಇಂಗ್ಲಿಷ್ ಮಾತನಾಡಬಲ್ಲ ಫಮಿಲಾ ಹಾಗೂ ಇತರ ಹಿಜ್ರಾಗಳೂ ಸಹ 'ನಿರ್ವಾಣ'ಕ್ಕಾಗಿ ತಮ್ಮ ಸಮುದಾಯದ ಸಹಾಯ ಹಸ್ತಕ್ಕೆ ಕೈ ಚಾಚುವುದನ್ನು ನಾವು ಕಾಣಬಹುದು.

'ಹಿಜರಾ' ಆಗಿರುವ ಮಕ್ಕಳು ತಮಗೆ ಅವಮಾನಕಾರಿ ಎಂದೇ ಕುಟುಂಬದವರು ಭಾವಿಸುತ್ತಾರೆ. ಹಾಗಾಗಿ ಬಾಲ್ಯದ ಅವಮಾನಗಳಿಂದ ನೊಂದ-ಬೆಂದ ಮಕ್ಕಳು ಸಮುದಾಯದ ನೆರವನ್ನು ಹುಡುಕಿಕೊಂಡು ಹೋಗುವುದನ್ನು ನಾವು ಕಾಣಬಹುದಾಗಿದೆ. 10ನೆಯ ತರಗತಿಯಲ್ಲಿ ಇಂಗ್ಲಿಷ್ ಭಾಷೆಯಲ್ಲಿ ಫೇಲಾಗುವ ರೇವತಿ ಕೂಡಾ ತಮ್ಮ ಸಮುದಾಯದವರೊಡನೆ ಸಂಪರ್ಕ ಬೆಳೆಸಿ ಹೆಣ್ಣಾಗಿ ಬದುಕುವುದಕ್ಕಾಗಿ ಓಡಿಹೋಗುವುದನ್ನು ನಾವು ಕಾಣಬಹುದು. ಹಿಜ್ರಾಗಳ ಬದುಕಿನಲ್ಲಿ ಬಾಲ್ಯದ ಬವಣೆಗಳು ಹೆಚ್ಚು ಕುಟುಂಬದಲ್ಲಿ ಹೇಳಲಿಕ್ಕೆ ಆಗದೇ ಒದ್ದಾಡುವುದರ ಜೊತೆಗೆ ಸಹಪಾಠಿಗಳಿಂದ, ಸುತ್ತ-ಮುತ್ತಲಿನವರಿಂದ ಅಪಮಾನಗಳು. ನಂ 9 ಎಂದು ಕರೆದು ಅವಮಾನ ಮಾಡುವವರು, ಕಿಚಾಯಿಸುವವರು, ಹೆಣ್ಣೇನೋ ಎಂದು ಅವಹೇಳನ ಮಾಡುವವರು- ಇಂತಹ ಬಾಲ್ಯದ ಜೀವನದಲ್ಲಿ ಓದನ್ನು ಮುಂದುವರಿಸುವವರೇ ಕಡಿಮೆ. ವಿದ್ಯಾ ಇದಕ್ಕೊಂದು ಅಪವಾದ. ಈಕೆಯ ಬದುಕಿನ ಆಯ್ಕೆಗಳನ್ನು ಸಾಧ್ಯವಾಗಿಸುವುದು ಈಕೆಯ ಓದು, ದೃಷ್ಟಿಕೋನ. ಈಕೆ ವಿದ್ಯಾವಂತೆ, ಕಲಾವಿದೆ, ಹೀಗೇ ತನ್ನ ಬದುಕು ಇರಬೇಕೆಂಬ ದಿಟ್ಟ ನಿಲುವು ಹೊಂದಿದವಳೂ ಕೂಡಾ.

ಆಯ್ಕೆ ಸಾಧ್ಯವಾಗದ ಹಂತದಲ್ಲಿ ಪಾಪಕೂಪದ ಜೀವನದಲ್ಲಿ ಮಿಂದು ಎದ್ದ ರೇವತಿ, ಮೌಲ್ಯಾಧಾರಿತ ಬದುಕನ್ನೇ ಆರಿಸಿಕೊಳ್ಳಬೇಕೆಂಬ ಹಟದಿಂದಲೇ ಆಯ್ಕೆ ಮಾಡಿಕೊಂಡು ಬದುಕಿದ ವಿದ್ಯಾ ಇಬ್ಬರೂ ಹಿಜ್ರಾ ಬದುಕಿನ ಜೀವನಕ್ಕೆ ಕನ್ನಡಿ ಹಿಡಿಯುತ್ತಾರೆ. ಕನ್ನಡಿಯ ಬಗ್ಗೆ ಇಬ್ಬರೂ ವಿಶೇಷವಾಗಿಯೇ ಪ್ರಸ್ತಾಪ ಮಾಡುತ್ತಾರೆ. ನಾರ್ಮಲ್ ಎನ್ನಿಸಿಕೊಂಡವರಿಗೆ ಈ ಸಮಾಜದಲ್ಲಿ ಕನ್ನಡಿ ನಮ್ಮ ಬಾಹ್ಯ ರೂಪದ ಪ್ರತಿಬಿಂಬ ಮಾತ್ರ. ಆದರೆ ರೇವತಿ, ವಿದ್ಯಾ ಈರ್ವರಿಗೂ ಕನ್ನಡಿ ಪುರುಷ ದೇಹದೊಳಗಿನ ಹೆಣ್ತನವನ್ನು ಅಭಿವ್ಯಕ್ತಿಗೊಳಿಸಲಿಕ್ಕೆ ಇರುವ ಮುಖ್ಯವಾದ ಅಂಶ. ಹಾಗಾಗಿ ಕನ್ನಡಿಯ ಬಗ್ಗೆ ವಿದ್ಯಾ ಬರೆಯುತ್ತಾರೆ:

> **“ನನ್ನಂಥವರಿಗೆ ಕನ್ನಡಿ ಒಂದು ವರಪ್ರಸಾದ. ಕನ್ನಡಿ ಎಲ್ಲರಿಗೂ ಅವರವರ ಸ್ಥೂಲ ಆಕಾರವನ್ನು ಪ್ರತಿಫಲಿಸಿದರೆ, ಹಿಜಡಾಗಳಿಗೆ ಮಾತ್ರ ಅವರ ಮನಸ್ಸನ್ನೂ, ಒಳಗಿನ ಭಾವಗಳನ್ನೂ, ಆಂತರಿಕವಾದ ಅವರ ಸ್ತ್ರೀತನವನ್ನೂ ಒಂದು ಚಿತ್ರವಾಗಿ ಪರಿವರ್ತಿಸಿ ತೋರಿಸುತ್ತದೆ. ಇದನ್ನು ಇತರರು ಅರ್ಥಮಾಡಿಕೊಳ್ಳಲು ಸಾಧ್ಯವೇ ಇಲ್ಲ. ನಿಮಗೆ ಮುಖವನ್ನೂ, ನನಗೆ ಮುಖದ ಹಿಂದಿರುವ ಮನಸ್ಸನ್ನೂ ತೋರಿಸುವ ಸಾಧನ ಅದು! ನನಗೆ ಎಂದರೆ ನಮಗೆ ನಮಗೆಲ್ಲರಿಗೂ!”**
>
> *(ಪು.77 'ನಾನು ಅವನಲ್ಲ... ಅವಳು')*



ವಿದ್ಯಾ 'ನಿರ್ವಾಣ'ಕ್ಕಾಗಿ ಓಡಿಹೋದ ಹಂತದಲ್ಲಿ ನಿಂತು ಬಾಲ್ಯದ ಅನುಭವಗಳಿಗೆ ಮರಳಿದರೆ ರೇವತಿ ತಮ್ಮ ಹುಟ್ಟೂರಿನಿಂದಲೇ ತಮ್ಮ ಜೀವನದ ಕಥೆಯನ್ನು ಪ್ರಾರಂಭಿಸುತ್ತಾರೆ. "ನಾನು ಯಾರು? ತತ್ವಗಳ ಆರಂಭವೂ ಅಂತ್ಯವೂ ಅಡಗಿರುವುದು ಈ ಪ್ರಶ್ನೆಯಲ್ಲಿಯೇ"-ಎಂಬ ಸಾಲು 'ನಾನು ಅವನಲ್ಲ...' ಪುಸ್ತಕದ ಆರಂಭದಲ್ಲಿ ಇದೆ. ಬಾಲ್ಯದಲ್ಲಿ ರೇವತಿ, ವಿದ್ಯಾರಿಗೆ ಕಾಡುವ ಪ್ರಶ್ನೆಯೂ ಇದೇಯೇ. ಗಂಡೋ-ಹೆಣ್ಣೋ, ಗಂಡಿನ ವೇಷದಲ್ಲಿ ಬಂಧಿತಳಾದ ತಾನು ಹೆಣ್ಣಾಗುವುದು ಹೇಗೆ? ಈ ತಹ ತಹ, ತವಕಗಳು ಇಬ್ಬರ ಆತ್ಮಕಥನದಲ್ಲಿಯೂ ಕಂಡುಬರುತ್ತವೆ. ಯಾರೂ ಇಲ್ಲದಾಗ ಸೊಂಟ ಬಳುಕಿಸಿ ಓಡಾಡುವುದು, ನೃತ್ಯ ಮಾಡುವುದು, ಕನ್ನಡಿಯ ಮುಂದೆ ನಿಂತು ಹೆಣ್ಣಿನಂತೆ ನಟಿಸುವುದು-ಹೆಣ್ತನದ ಅಭಿವ್ಯಕ್ತಿ ಕೊಡುವ ಆನಂದದ ಭಾವವನ್ನು ಇಬ್ಬರೂ ಉತ್ಕಟವಾದ ಭಾಷೆಯಲ್ಲಿ ಬರೆಯುತ್ತಾರೆ. ವಿದ್ಯಾ ನಾಲ್ಕನೇ ದರ್ಜೆಯ ಕಸ ಗುಡಿಸುವ ನೌಕರನ ಒಬ್ಬನೇ ಮಗ-ಶರವಣನಾಗಿ ಹುಟ್ಟಿ-ಬಾಹ್ಯ ಜೀವನದಲ್ಲಿ ಗಂಡಸಿನಂತೆ, ಅಂತರಂಗದಲ್ಲಿ ಹೆಣ್ಣಿನಂತೆ ಬದುಕಲು ಇಷ್ಟಪಡದವಳು. ರೇವತಿ ನಾಲ್ಕು ಗಂಡು ಮಕ್ಕಳಲ್ಲಿ-ಒಬ್ಬರು, ದೊರೆಸ್ವಾಮಿ. ವಿದ್ಯಾರ ಕುಟುಂಬ ಜಾತಿಯ ಹೆಸರಿನಲ್ಲಿ ಸಮಾಜ ತಮ್ಮನ್ನು ದೂರವಿಟ್ಟ ನೋವಿನಿಂದ ನೊಂದವರು.


ಲಿವಿಂಗ್ ಸ್ಮೈಲ್ ವಿದ್ಯಾ

ವಿದ್ಯಾ ಪದವೀಧರೆಯಾದರೂ, ರೇವತಿ 10ನೆಯ ತರಗತಿಯಲ್ಲಿ ಇಂಗ್ಲಿಷ್ ಫೇಲಾಗಿ ವಿದ್ಯಾಭ್ಯಾಸ ನಿಲ್ಲಿಸಿದ್ದರೂ - ಈ ಓದು ಎನ್ನುವುದು ಅಂತಹ ಪರಿಣಾಮಕಾರಿ ಬದಲಾವಣೆಯನ್ನೇನೂ ತರದು ಎನ್ನುವುದು ಇವರ ಸಮುದಾಯದವರ ಅಳಲು. 'ಓದಿದ್ರೂ, ಓದದಿದ್ರೂ ಕೋಲೆಗಳು ಕೋಲೆಗಳೇ ಆಯ್ತಾ' ಎನ್ನುವುದು ಹಿಜ್ರಾ ಸಮುದಾಯದ ನಿಲುವು. 'ನಿರ್ವಾಣ'ವಾದ ಮೇಲೆ ಹೆಣ್ಣಾಗುವ ಪ್ರಕ್ರಿಯೆಯ ಒಂದು ಸಾಂಸ್ಕೃತಿಕ ಆಚರಣೆಯ ಹೊಣೆಯನ್ನು ಈ ಸಮುದಾಯವೇ ಹೊರುತ್ತದೆ. 'ನಿರ್ವಾಣ'ವಾದ ನಲವತ್ತು ದಿನಗಳಕಾಲ ಇವರನ್ನು ನೋಡಿಕೊಳ್ಳುವ ಹೊಣೆಯನ್ನು ಕೂಡಾ ಸಮುದಾಯದವರೇ ಹೊತ್ತುಕೊಳ್ಳುತ್ತಾರೆ. ವಿದ್ಯಾರವರು ಬದುಕಿಗೆ ಬೇರೆ ರೀತಿಯಲ್ಲಿ ತೆರೆದುಕೊಂಡಿರುವುದರಿಂದ 'ನಿರ್ವಾಣ'ಕ್ಕಾಗಿ ಮಾತ್ರ ಸಮುದಾಯದ ಒಳಗೆ ಬೆರೆಯುತ್ತಾರೆ. ಆದರೆ ಸಮುದಾಯದಲ್ಲಿ ರೂಢಿಗತವಾಗಿರುವ ಭಿಕ್ಷೆ ಬೇಡುವ/ಲೈಂಗಿಕ ವೃತ್ತಿಯ ಬಗ್ಗೆ ಈಕೆಗೆ ಪ್ರಾರಂಭದಿಂದಲೂ ವಿರೋಧ. 'ನಿರ್ವಾಣ'ಕ್ಕಾಗಿ ಭಿಕ್ಷೆ ಬೇಡಲೇಬೇಕಾದ ಪರಿಸ್ಥಿತಿ ಬಂದಾಗ ಈಕೆಗೆ ತಮ್ಮ ಪದವಿ, ಸರ್ಟಿಫಿಕೇಟ್ಸ್ ಎಲ್ಲವೂ ಜ್ಞಾಪಕಕ್ಕೆ ಬರುತ್ತವೆ. ರೇವತಿ ಬದುಕಿನುದ್ದಕ್ಕೂ ಸಮುದಾಯದ ಒಳಗೇ ತಮ್ಮನ್ನು ಗುರುತಿಸಿಕೊಳ್ಳುತ್ತಾ ಹೋಗುತ್ತಾರೆ. ಸಮುದಾಯದಲ್ಲಿ ಅನೇಕ ಗುರುಗಳಿಗೆ ಚೇಲಾ ಆಗುತ್ತಾರೆ. ಲೈಂಗಿಕ ಅಭಿಲಾಷೆಗಾಗಿ ಎಂದು ಲೈಂಗಿಕ ವೃತ್ತಿಗೆ ಇಳಿಯುವ ರೇವತಿ ಇದನ್ನು ಉದ್ಯೋಗವಾಗಿ ಸ್ವೀಕರಿಸಲೇಬೇಕಾದಾಗ ಅಲ್ಲಿ ಅನುಭವಿಸುವ ಹಿಂಸೆಯನ್ನು ಬಿಚ್ಚಿ ಇಡುತ್ತಾರೆ. ಈ ಬದುಕಿನ ರುದ್ರ ಮುಖದ ಭಾಗವನ್ನು ನಾವು ರೇವತಿಯವರ ಆತ್ಮಕಥನದಲ್ಲಿ ನೋಡಬಹುದಾಗಿದೆ. ರೌಡಿಗಳು ಹೆದರಿಸಿ ಅವರಿಗೆ ಬೇಕಾದ ಹಾಗೆ ಈಕೆಯಿಂದ ಲೈಂಗಿಕ ತೃಷೆ ತೀರಿಸಿಕೊಳ್ಳುವುದು. ಈಕೆಯಿಂದಲೇ ಹಣ ಕಸಿದುಕೊಂಡು ಹೋಗುವುದು, ಹಣಕ್ಕಾಗಿ ಮತ್ತೆ ಮತ್ತೆ ಬ್ಲಾಕ್ ಮೇಲ್ ಮಾಡುವುದು, ಗಿರಾಕಿಗಳನ್ನು ಕರೆಯುವಾಗ ಸಮುದಾಯದ ಭಿನ್ನ ಭಿನ್ನ ಬಣದ ನಡುವೆ ನಡೆಯುವ ತಿಕ್ಕಾಟಗಳು, ಹೆಣ್ಣೆಂದೇ ತೋರುವಂತೆ ಹುನ್ನಾರಗಳ ಮಾಡಿ ಗಿರಾಕಿಗಳನ್ನು ತಮ್ಮೆಡೆಗೆ ಸೆಳೆಯುವ ಪ್ರಯತ್ನಗಳು, ಈ ವೇಶ್ಯಾವೃತ್ತಿ ಮಾಡುವ ಸ್ಥಳಗಳೇ ಅಂದರೆ-ಮೇಲೆ, ಕೆಳಗಿನ ಮಂಚಗಳೇ ವ್ಯವಹಾರದ ನಂತರ ವಾಸಸ್ಥಾನಗಳಾಗುವುದು, ಲೈಂಗಿಕ ವೃತ್ತಿ ನಡೆಸುವ ಸ್ಥಳಕ್ಕೆ 'ಬಾಸ್'ಗಳಾದ ಮಹಿಳೆಯರ ದರ್ಪ, ಅಧಿಕಾರ ಇವೆಲ್ಲದರ ವಿವರಗಳನ್ನು ರೇವತಿಯವರ ಆತ್ಮಕಥನ ಪ್ರಾಮಾಣಿಕವಾಗಿ ಬಿಚ್ಚಿಡುತ್ತದೆ. ಹಾಗಾಗಿ ಇವರ ಬದುಕು ಪಾಪದ ಕೂಪದಲ್ಲಿ ಬಿದ್ದು ಎದ್ದು ಬಂದ ಫೀನಿಕ್ಸ್ ಹಕ್ಕಿಯ ಬದುಕು ಎನಿಸುವುದು. ಈ ಮಧ್ಯದಲ್ಲಿ



**ನಾವು ಸ್ತ್ರೀವಾದಿಗಳು ಹೆಣ್ತನ-ಗಂಡುತನದ ಬಗ್ಗೆ ಆ ಕಾಲದಿಂದಲೂ ಚರ್ಚೆ ಮಾಡುತ್ತಲೇ ಬಂದಿದ್ದೇವೆ. ಹೆಣ್ಣಿನಲ್ಲಿರುವ ಗಂಡುತನ, ಗಂಡಿನಲ್ಲಿರುವ ಹೆಣ್ತನದ ಬಗ್ಗೆ ವಿಶ್ಲೇಷಿಸುತ್ತಾ ಅರ್ಧನಾರೀಶ್ವರ ಕಲ್ಪನೆಯನ್ನು ಎತ್ತಿ ಹಿಡಿಯುತ್ತಲೇ ಬಂದಿದ್ದೇವೆ. ನಾವು ಮಾತನಾಡುವ ಲಯ ಆಂತರ್ಯಕ್ಕೆ, ಮನಸ್ಸಿನ ವಲಯಕ್ಕೆ ಸೇರಿದ್ದು. ಗಡ್ಡ ಮೀಸೆಯುಳ್ಳ ಗಂಡಸು ಮೆದುವಾಗಿರುವುದು, ಅಂತಃಕರಣ ಹೊಂದಿರುವುದು, ಕಾಳಜಿ ವಹಿಸುವುದು, ಕೌಟುಂಬಿಕ ಪರಿಸರದಲ್ಲಿ ಅತ್ಯಂತ ಆತ್ಮೀಯವಾಗಿ ಇರುವುದು-ಇವು ಗಂಡಿನಲ್ಲಿರುವ 'ಹೆಣ್ತನ'ಗಳೆಂದು ಅಂದುಕೊಂಡರೆ, ಮೊಲೆಯುಳ್ಳ ಹೆಣ್ಣು ಈ ಬಾಹ್ಯ ಪ್ರಪಂಚಕ್ಕೆ ಮುಖಾಮುಖಿಯಾಗಿ ಎಲ್ಲದಕ್ಕೂ ಮುಂದೆ ಹೋಗುವ, ಎಲ್ಲವನ್ನೂ ಪ್ರಶ್ನಿಸುವ, ಎಲ್ಲವನ್ನೂ ಎದುರಿಸುವ ಮನಃಸ್ಥಿತಿಯವಳಾದರೆ ಇವು ಆಕೆಯಲ್ಲಿರುವ 'ಗಂಡುತನ'ಗಳೆಂದು ಗುರುತಿಸುತ್ತೇವೆ. ಈ ಹೆಣ್ತನ-ಗಂಡುತನಗಳನ್ನು ಬಾಹ್ಯ ಚಹರೆಗಳಿಂದಾಗಿ ಪ್ರತ್ಯೇಕಿಸುವ ಬಗ್ಗೆ ನಮ್ಮ ತಕರಾರು ಯಾವಾಗಲೂ ಇದ್ದೇ ಇದೆ.**

*(ಆಗಸ್ಟ್ 2009 'ನಮ್ಮ ಮಾನಸ'ದ ನನ್ನದೇ ಲೇಖನದಿಂದ)*

ಕುಡಿಯುವುದನ್ನು ಕಲಿಯುವುದು, ಕುಡಿದಾಗ ಆಗುವ ಗಲಾಟೆಗಳು, ಈ ಗಲಾಟೆಗಳಿಂದ ಭಿನ್ನ ಭಿನ್ನ ಪಂಗಡಗಳ ನಡುವೆ ವಿರಸ, ಜಗಳ-ಹೀಗೆ ಲೈಂಗಿಕ ಉದ್ಯೋಗದ ಒಳಗಿನ ರೌಡಿಯಿಸಂ, ಗಿರಾಕಿಗಳ ಒರಟುತನ, ಸಹವರ್ತಿಗಳ ಅಸಡ್ಡೆ-ಇಂತಹ ಅಡ್ಡೆಯ ಬದುಕಿನ ರೌದ್ರ ಮುಖಗಳನ್ನು ರೇವತಿ ನಮ್ಮ ಮುಂದೆ ಬಿಚ್ಚಿ ಇಡುತ್ತಾರೆ.

ಹಿಜ್ರಾ ಬದುಕಿನ ಇನ್ನೊಂದು ಸಂಗತಿಯೆಂದರೆ ಕುಟುಂಬದ ಒಳಗಿನ ತಲ್ಲಣಗಳು. ಬಾಲ್ಯದ ಸಂಕಷ್ಟಗಳು ಒಂದು ರೀತಿಯಂದರೆ, ನಿರ್ವಾಣಕ್ಕಾಗಿ ಹೆಣ್ಣಾಗಿ ಪರಿವರ್ತಿತವಾದ ದೇಹದೊಂದಿಗೆ ಕುಟುಂಬದ ಜೊತೆ ನಂಟು ಬೆಳೆಸುವುದು ಇನ್ನೊಂದು ರೀತಿಯ ತಲ್ಲಣ. ಕುಟುಂಬದ ಪಾತ್ರ ಎಷ್ಟು ಮುಖ್ಯ ಎಂಬುದರ ಬಗ್ಗೆ ವಿದ್ಯಾ, ರೇವತಿ ಇಬ್ಬರೂ ಬರೆಯುತ್ತಾರೆ. ಅಷ್ಟು ದೊಡ್ಡ ಆಪರೇಷನ್ ಗಾಗಲೀ, ಆರೈಕೆಗಾಗಲೀ ಮನೆಯವರು ಪಕ್ಕದಲ್ಲಿ ಇಲ್ಲದಿರುವುದು ಒಂದು ಸಂಕಟವಾದರೆ, ಹೆಣ್ಣಾಗಿ ಪರಿವರ್ತಿತವಾದ ಗಂಡು ಮಕ್ಕಳನ್ನು 'ಆಕೆ' ಎಂದು

ಕುಟುಂಬದವರು ಒಪ್ಪಿಕೊಳ್ಳಲು ಸಾಧ್ಯವಾಗದಿರುವುದು ಇನ್ನೊಂದು ಸಂಕಟ. ಸೀರೆ ಉಟ್ಟ ವಿದ್ಯಾರನ್ನು ನೋಡುವುದೇ ಇಲ್ಲ ಎಂದು ಆಕೆಯ ಅವ್ವ ಹಟ ಹಿಡಿಯುತ್ತಾರೆ. ಸೀರೆ ಬಿಚ್ಚಿ ಹಾಕಿ ಗಂಡಸರಂತೆ ಉಡುಗೆ ತೊಡು ಎಂದು ಹಿಗ್ಗಾ ಮುಗ್ಗ ಹೊಡೆಯುವ ರೇವತಿಯ ಅಣ್ಣಂದಿರು. ತನಗೆ ಆಪರೇಷನ್ ಆಗಿದೆ, ತಾನು ಹೆಣ್ಣು, ಬೇಕಿದ್ದರೆ ನೋಡು ಎಂದು ರೇವತಿ ಉಟ್ಟ ಬಟ್ಟೆಯನ್ನು ಮೇಲೆ ಎತ್ತಿ ಅಣ್ಣನಿಗೆ ತೋರಿಸುವುದು – ಹೀಗೆ ತಮ್ಮ ಬದಲಾದ ಅಸ್ತಿತ್ವದ ಬಗ್ಗೆ ಅಸ್ತಿತ್ವದ ಅಸ್ಮಿತೆಯ ಬಗ್ಗೆ ಹೇಗೆ ಪರದಾಡಬೇಕಾಗುತ್ತದೆ ಎಂಬುದನ್ನು ರೇವತಿ ಹಾಗೂ ವಿದ್ಯಾ ಇಬ್ಬರೂ ಬಿಚ್ಚಿ ಇಡುತ್ತಾರೆ.

ಕುಟುಂಬದವರು ಈ ಬಗ್ಗೆ ತಿಳಿವಳಿಕೆ ಉಳ್ಳವರಾದರೆ, ಹಿಜ್ರಾಗಳಿಗೆ ಅವರದೇ ಬದುಕಿಗೆ ಎನ್ನುವಷ್ಟು ಪ್ರಜ್ಞಾವಂತರಾದರೆ ಬಹುಶಃ ಹಿಜ್ರಾಗಳ ಬದುಕು ವಿದ್ಯಾ, ರೇವತಿಯವರಷ್ಟು ಹೀನಾಯವಾಗಬೇಕಿಲ್ಲ. ಅಥವಾ ಅಷ್ಟೊಂದು ಅಸಹಾಯಕತೆಯೂ ಇರುವುದಿಲ್ಲ. ವಿದ್ಯಾರ ಕುಟುಂಬದಲ್ಲಿ ತಂದೆ–ಭಾವ ಮುಜುಗರ ವ್ಯಕ್ತಪಡಿಸಿದರೂ ಹಿಂಸಾತ್ಮಕ ಪ್ರವೃತ್ತಿಗಳು ಕಂಡುಬರುವುದಿಲ್ಲ. ಆದರೆ ರೇವತಿಯ ವಿಚಾರದಲ್ಲಿ ಕುಟುಂಬದವರು ದೈಹಿಕವಾಗಿ ದಂಡಿಸುವಂತಹ ಹಿಂಸಾತ್ಮಕ ಕೃತ್ಯಕ್ಕೆ ಇಳಿಯುತ್ತಾರೆ. ಹಳ್ಳಿಯಲ್ಲಿ ಬದುಕುವಾಗ ಬಾಬು ಎನ್ನುವ ಹುಡುಗನೊಂದಿಗೆ ರೇವತಿ ಆತ್ಮೀಯತೆ ಬೆಳೆಸಿಕೊಂಡ ಸಂದರ್ಭ ದಲ್ಲಿಯಂತೂ ಹಿಜ್ರಾಗಳ ಲೈಂಗಿಕತೆಯ ಬಗ್ಗೆ ಆಕೆಯ ಅಣ್ಣಂದಿರು ಬಳಸುವ ಭಾಷೆ, ಭಾವಗಳು ಈ ಸಮಾಜದ ಕ್ರೂರತೆಯನ್ನು ಬಿಂಬಿಸುತ್ತವೆ. ಅವರು ಮನುಷ್ಯರೇ ಅಲ್ಲ ಎನ್ನುವಂತಹ ಅಮಾನವೀಯ ಧೋರಣೆಗಳು ಎಲ್ಲೆಲ್ಲೂ ಸಾಮಾನ್ಯವಾಗಿ ಬಿಟ್ಟಿವೆ.

ಸಮುದಾಯದಲ್ಲಿ ಉಂಟಾಗುವ, ಲೈಂಗಿಕ ಉದ್ಯೋಗದಲ್ಲಿ ಉಂಟಾಗುವ ಹತಾಶೆ/ನಿರಾಸೆಯಿಂದ ಕುಟುಂಬಕ್ಕೆ ಹಿಂತಿರುಗುವ, ಕುಟುಂಬದ ಹುನ್ನಾರಗಳಿಂದ ಬೇಸತ್ತು ಸಮುದಾಯಕ್ಕೆ ಹಿಂತಿರುಗುವ ಪ್ರಕ್ರಿಯೆ ರೇವತಿಯವರ ಬದುಕಿನಲ್ಲಿ ಕಂಡುಬರುತ್ತದೆ.

ಆದರೆ ಸಮುದಾಯದಲ್ಲಿಯೇ ಬದುಕುವುದೆಂದರೆ ಭಿಕ್ಷಾಟನೆ, ಲೈಂಗಿಕ ಉದ್ಯೋಗ ಅನಿವಾರ್ಯವಾಗುತ್ತದೆಯೆಂಬ ಕಾರಣಕ್ಕಾಗಿಯೇ ವಿದ್ಯಾ ಭಿನ್ನವಾದ ಉದ್ಯೋಗ ಹುಡುಕಿದರು. 'NGO ನಲ್ಲಿ ಕೆಲಸ ಬೇಡವೇ ಬೇಡ' ಎಂದು ಸ್ಪಷ್ಟತೆ ಹೊಂದಿದ್ದವರು. ವಾಪಸ್ಸು ಬಂದ ಮೇಲೆ ಭಾಷಾಶಾಸ್ತ್ರದಲ್ಲಿ ಎಂ.ಎ. ಮುಗಿಸಿದವರು. ಭಿಕ್ಷಾಟನೆ, ಲೈಂಗಿಕ ವೃತ್ತಿ ಮಾಡಲೇ ಬಾರದೆಂದು ಹಟತೊಟ್ಟರು. ಆದರೆ ಬದುಕು ಸಾಗಿಸಲಿಕ್ಕಾಗಿಯೇ ಅನಿವಾರ್ಯವಾಗಿ, ಹಾಗೆ ಆಯ್ಕೆ ಇಲ್ಲದೇ ಭಿಕ್ಷಾಟನೆ, ಲೈಂಗಿಕವೃತ್ತಿಗೆ ತಮ್ಮ ಸಮುದಾಯದವರು ಇಳಿಯುತ್ತಾರೆಂದು ವಿದ್ಯಾರವರೂ ಒಪ್ಪುತ್ತಾರೆ.



**ಈ ಎರಡು ಆತ್ಮಕಥನಗಳು ಇಡುವ ಬೇಡಿಕೆ/ಎತ್ತುವ ಪ್ರಶ್ನೆಗಳಲ್ಲಿ ಮುಖ್ಯವಾದವು**

- ಆಪರೇಷನ್ ನ್ಯಾಯಬದ್ಧವಾಗಬೇಕು.
- ರೇಷನ್‌ಕಾರ್ಡ್, ಪಾಸ್‌ಪೋರ್ಟ್, ವೀಸಾ ಸಿಗುವಂತಾಗ ಬೇಕು.
- ಆಪರೇಷನ್ ಆದಮೇಲೆ ಹೆಣ್ಣಾಗಿ ಬದಲಾದ ಬಗ್ಗೆ ಸರ್ಟಿಫಿಕೇಟ್ ಸಿಗಬೇಕು.
- ಸರ್ಟಿಫಿಕೇಟ್ ಆಧಾರದ ಮೇಲೆ ಇವರ ಅಸ್ತಿತ್ವ ಗುರುತಿಸಿ ಅಂತೆಯೇ ಎಲ್ಲಾ ರೆಕಾರ್ಡ್ಸ್‌ಗಳಲ್ಲಿ ಬಳಸುವಂತೆ ಸರ್ಕಾರ ಆದೇಶಿಸಬೇಕು.
- ಉದ್ಯೋಗದ ಅವಕಾಶ ಕಲ್ಪಿಸಬೇಕು.
- ನಂ 9, ಚಕ್ಕ–ಈ ತರಹದ ಭಾಷೆಯ ಬಳಕೆಯನ್ನು ನಿಷೇಧಿಸಬೇಕು.
- ಕುಟುಂಬ/ಸಮಾಜ–ದಲ್ಲಿ ಇವರ ಬದುಕಿನ ಬಗ್ಗೆ ಪ್ರಜ್ಞಾವಂತಿಕೆ ಹೆಚ್ಚಿಸುವಂತಹ ತರಬೇತಿಗಳು ನಡೆಯಬೇಕು.
- ಇವರ ಹುಟ್ಟು ಪ್ರಕೃತಿದತ್ತವಾದ್ದರಿಂದ ಅವರನ್ನು 'ಮನುಷ್ಯ'ರು ಎಂದು ಸಹಜವಾಗಿ ಗುರುತಿಸುವ ಧೋರಣೆ ಬೆಳೆಯಬೇಕು.

ರೇವತಿಯವರ ಬದುಕಿನ ಪಯಣವನ್ನು ತಮಿಳುನಾಡು, ಬಾಂಬೆ, ಡೆಲ್ಲಿ, ಬೆಂಗಳೂರುನಗರದಲ್ಲಿ ಕಾಣಬಹುದಾಗಿದೆ. ಬೆಂಗಳೂರಿನಲ್ಲಿ ಲೈಂಗಿಕ ವೃತ್ತಿಗೆ ಇಳಿಯುವ ರೇವತಿ ಪೊಲೀಸರಿಂದ ತಾವು ಅನುಭವಿಸುವ ಕಿರುಕುಳವನ್ನು ಬಿಚ್ಚಿ ಇಡುತ್ತಾರೆ. ಪೊಲೀಸ್‌ಠಾಣೆಯಲ್ಲಿ ನಡೆಯುವ ಲೈಂಗಿಕ ಹಿಂಸೆಯ ಭಾಷೆ, ಕ್ರಿಯೆ ಹೇಗಿರುತ್ತದೆ ಎಂಬುದನ್ನು ವಿವರಿಸುತ್ತಾರೆ. ಪೊಲೀಸ್ ಹಾಗೂ ರೌಡಿಗಳೂ ತಮ್ಮಂಥವರನ್ನು ಎಂತೆಂತಹ ಇಕ್ಕಟ್ಟಿಗೆ ತಗಲಿಸುತ್ತಾರೆ ಎಂಬುದರ ಮೇಲೂ ಬೆಳಕು ಚೆಲ್ಲುತ್ತಾರೆ.

**ಈ ಕಥನಗಳು ನಮ್ಮನ್ನು ಬೆಚ್ಚಿಸುತ್ತವೆ. ಬೆರಗು ಹುಟ್ಟಿಸುತ್ತವೆ. ತಾತ್ವಿಕತೆಯ ಚೌಕಟ್ಟನ್ನು ಕದಲಿಸುತ್ತವೆ. ಗಂಡು–ಹೆಣ್ಣಿನ ವ್ಯಾಖ್ಯಾನದ ಪರಿಧಿಯನ್ನು ಮಸುಕುಗೊಳಿಸುತ್ತವೆ.**

ಮದುವೆಯಂತಹ ಸಂಬಂಧ ಮುರಿದು ಬೀಳುವ ಬಗೆಯನ್ನು ರೇವತಿ ವಿವರಿಸುತ್ತಾರೆ. ತಾವು NGO ನಲ್ಲಿ ಕೆಲಸ ಮಾಡುವುದರಿಂದ ಸಮುದಾಯದ ಜೊತೆಗಿನ ತಮ್ಮ ಬಾಂಧವ್ಯಕ್ಕೆ ಧಕ್ಕೆ ಬರುತ್ತದೆ ಎಂಬ ಅಳುಕಿದ್ದರೂ ಈಕೆ NGO ನಲ್ಲಿಯೇ ಕೆಲಸ ಮುಂದುವರಿಸುತ್ತಾರೆ.

ಲಿವಿಂಗ್‌ಸ್ಮೈಲ್ ವಿದ್ಯಾ ಸಾಕ್ಷರತೆಯ ಪ್ರಪಂಚದ ಅಂಚಿನ ಅರಿವಿನಿಂದ ಅವರ ಅನುಭವಗಳನ್ನು ತೆರೆದಿಟ್ಟರೆ, ರೇವತಿ ಅನಕ್ಷರಸ್ಥ, ಹಿಜಡಾ ಲೋಕದ ಪ್ರತಿನಿಧಿಯಾಗಿ ಕಾಣಿಸುತ್ತಾರೆ. ಮೊದಲೇ ಹೇಳಿದ ಹಾಗೆ ಈ ಲೋಕದ ಮಂದಿಯಲ್ಲಿ ಅಕ್ಷರತೆ/ಅನಕ್ಷರತೆ ಕೂಡಾ ಒಂದು ಹಂತದಲ್ಲಿ ಮಬ್ಬಾಗುತ್ತದೆ. ಸಮುದಾಯದ ಒಳಗೇ ಬದುಕಿದ ರೇವತಿ ಅಲ್ಲಿರುವ ಸಂಬಂಧಗಳ ಬಗ್ಗೆ ಸೀನಿಯಾರಿಟಿಯ ಮಹತ್ವದ ಬಗ್ಗೆ, ಗುರು ಶಿಷ್ಯ ಸಂಬಂಧಗಳ ಬಗ್ಗೆ ಆಚರಣೆ, ನಿಯಮಾವಳಿಗಳ ಬಗ್ಗೆ ಸುದೀರ್ಘವಾಗಿಯೇ ಬರೆಯುತ್ತಾರೆ. ಒಟ್ಟಾಗಿ ಎರಡೂ ಆತ್ಮಕಥನಗಳೂ ಹಿಜ್ರಾ ಬದುಕಿನ ಲೋಕವನ್ನು, ಅಲ್ಲಿರುವ ತಳಮಳ, ನೋವುಗಳನ್ನು ತೆರೆದಿಡುವುದರಿಂದ–ನಾರ್ಮಲ್ ಎನ್ನಿಸಿಕೊಂಡವರ ಸೂಕ್ಷ್ಮತೆಗಳು ಈ ಬದುಕಿಗೆ ಸಂವೇದನಾತ್ಮಕವಾಗಿ ಪ್ರತಿಕ್ರಿಯಿಸಿದರೆ ಅದೊಂದು ಮಹತ್ವದ ಹೆಜ್ಜೆ ಆಗಬಹುದು. ಹಾಗೆಯೇ ಇಂತಹ ಬದುಕಿನ ಜಂಜಡದಲ್ಲಿ ಒದ್ದಾಡುವ ಹಲವಾರು ಮಂದಿಗೆ ಈ ಆತ್ಮಕಥನಗಳು ಬದುಕಿಗೆ ದಾರಿದೀಪಗಳೂ ಕೂಡಾ ಆಗಬಲ್ಲವು. ●




## ಲೇಖಕರುಸಂಸ್ಕೃತಿಯನ್ನು ಕೆಸರಿನಲ್ಲಿ ಅದ್ದಿದರೇ

■ *ಸಾರಾ ಅಬೂಬಕ್ಕರ್*

*ಭೈರಪ್ಪನವರ 'ಕವಲು' ಬಗ್ಗೆ 'ಮಾನಸ' ಹಾಗೂ ಮೈಸೂರಿನ 'ಸಮತಾವೇದಿಕೆ'ಗಳು ಒಟ್ಟಾಗಿ ವಿವಿಧ ಬರಹಗಾರರಿಂದ ಪ್ರತಿಕ್ರಿಯೆಗಳನ್ನು ಆಹ್ವಾನಿಸಿದ್ದವು. ಈ ಲೇಖನಗಳನ್ನು ಒಗ್ಗೂಡಿಸಿ ಒಂದು ಪುಸ್ತಕ ರೂಪದಲ್ಲಿ ದಾಖಲಿಸುವ ಆಶಯ ನಮ್ಮದಾಗಿತ್ತು. ಆದರೆ ಬಹುಜನರ ಅಭಿಪ್ರಾಯ "ಇಂಥ ಕಳಪೆ ಕೃತಿಗೆ ನಾವೂ ಪ್ರಚಾರ ಏಕೆ ಒದಗಿಸಬೇಕು?" ಎಂದು. ಕಳೆದ ಎರಡು ಸಂಚಿಕೆಯಿಂದ 'ಕವಲು' ಬಗ್ಗೆ ಚರ್ಚೆಗಳನ್ನು ಪ್ರಕಟಿಸಿದ್ದೇವೆ. ಈ ಸಂಚಿಕೆಗೆ ಈ ಬಗೆಗಿನ ಲೇಖನಗಳ ಪ್ರಕಟಣೆ ಮುಕ್ತಾಯಗೊಳಿಸಲಾಗಿದೆ.*

*–ಸಂ. ಮಂ.*

ಎಸ್.ಎಲ್. ಭೈರಪ್ಪನವರ 'ಕವಲು' ಕಾದಂಬರಿಯ ಕುರಿತು ಗೌರಿ ಲಂಕೇಶ್ ತಮ್ಮ ಸಂಪಾದಕೀಯದಲ್ಲಿ ಬರೆದದ್ದನ್ನು ಓದಿದ ಬಳಿಕ 250 ರೂಪಾಯಿಗೆ ಕೊಂಡುಕೊಂಡು ಓದಬೇಕಾದ ಅಗತ್ಯವಿಲ್ಲವೆನ್ನಿಸಿತು. ಭೈರಪ್ಪನವರ 'ಆವರಣ' ಕೃತಿಯನ್ನು ಓದಿ ನೋಡಬೇಕೆನ್ನಿಸಿದಾಗ ಲೇಖಕಿಯೊಬ್ಬರು, 'ಅದನ್ನು ಓದಿ ನಿಮ್ಮ ಸಮಯ ವ್ಯರ್ಥ ಮಾಡಬೇಡಿ' ಎಂದಿದ್ದರಿಂದ ಅದನ್ನು ಓದಲಿಲ್ಲ. ಮೂರುವಾರಗಳ ಹಿಂದೆ ಕೃತಿ ಬಿಡುಗಡೆ ಕಾರ್ಯಕ್ರಮವೊಂದರಲ್ಲಿ ಭಾಗವಹಿಸಿದಾಗ ನೆನಪಿನ ಕಾಣಿಕೆಯಾಗಿ 'ಕವಲು' ಕೃತಿ ನನ್ನ ಕೈ ಸೇರಿತು. ಆಗಲೂ ಓದಬೇಕೆನ್ನಿಸಿರಲಿಲ್ಲ. ಆದರೆ ಈಗ ಮೈಸೂರಿನಿಂದ ಲೇಖಕಿಯೊಬ್ಬರು ಫೋನಾಯಿಸಿ 'ಈ ಪುಸ್ತಕದ ಕುರಿತು ಏನಾದರೂ ಬರೆಯಿರಿ' ಎಂದಾಗ ಇದನ್ನು ಓದಲೇ ಬೇಕಾಯಿತು. ಓದುತ್ತಾ ಹೋದಂತೆ ಹಲವಾರು ಭಾವನೆಗಳ ತಾಕಲಾಟವಾರಂಭವಾಯಿತು.

ಭೈರಪ್ಪನವರು ಮುಸ್ಲಿಂ ವಿರೋಧಿ ಎಂಬುದು ಗೊತ್ತು. ಆದರೆ ಈ ಮಟ್ಟದ ಮಹಿಳಾ ವಿರೋಧಿ ಎಂದು ತಿಳಿದಿರಲಿಲ್ಲ. ಪುಸ್ತಕದ ಮಾರಾಟಕ್ಕಾಗಿ, ಪ್ರಚಾರಕ್ಕಾಗಿ ಪ್ರಖ್ಯಾತ ಲೇಖಕರೊಬ್ಬರು ಇಷ್ಟು ಕೆಳಮಟ್ಟಕ್ಕೂ ಇಳಿಯುತ್ತಿರುವುದು ಸಾಹಿತ್ಯ ಕ್ಷೇತ್ರಕ್ಕೆ ಅವಮಾನ ವೆನ್ನಬೇಕಾಗಿದೆ. ಅನಿಷ್ಟಕ್ಕೆಲ್ಲ ಶನೇಶ್ವರ ಗುರಿ ಎಂಬಂತೆ ಪುರುಷರ ಎಲ್ಲಾ ಸೋಲು ಮತ್ತು ಬೀಳುವಿಕೆಗೆ ಮಹಿಳೆಯರೇ ಕಾರಣ ಎಂದು ಭೈರಪ್ಪನವರು ತಮ್ಮ ಕಾದಂಬರಿಯಲ್ಲಿ ಪ್ರತಿಪಾದಿಸಿದ್ದಾರೆ. ಈ ಕಾದಂಬರಿಯಲ್ಲಿ ಚಿತ್ರಿಸಿದ ಎಲ್ಲ ಮಹಿಳೆಯರೂ ಪುರುಷ ವಿರೋಧಿಗಳೂ, ಪುರುಷರ ರಕ್ತ ಹೀರಿ ಅವರನ್ನು ಪಾರಾಗಿಸುವವರೂ ಆಗಿದ್ದಾರೆ. ಮಹಿಳೆಯರು ವಿದ್ಯಾವಂತರಾಗಿರದೆ ಮಂದಬುದ್ಧಿಯವರಾಗಿದ್ದು, ಪುರುಷರ ಆಜ್ಞಾನುವರ್ತಿಯಾಗಿರಬೇಕು ಎಂಬುದು ಇವರ ವಾದದ ತಿರುಳಾಗಿದೆ. ಪುರುಷರನ್ನು ಶೋಷಿಸುವ ಮಹಿಳೆಯರು ಇಲ್ಲವೇ ಇಲ್ಲವೆಂದಲ್ಲ. ನೂರರಲ್ಲಿ ಹತ್ತು ಜನರಾದರೂ ಅಂತಹವರಿರಬಹುದು. ಉಳಿದ ತೊಂಬತ್ತು ಮಹಿಳೆಯರ ಬದುಕಿನೆಡೆಗೆ ಭೈರಪ್ಪನವರು ಎಂದಾದರೂ ಕಣ್ಣು ಹಾಯಿಸಿಯೇ ಇರಲಾರರೇನೊ ಎಂದೆನ್ನಿಸುತ್ತಿದೆ. ಪುರುಷರಿಂದ ಎಂತೆಂತಹ ಶೋಷಣೆ, ಅತ್ಯಾಚಾರ ಗಳಿಗೊಳಗಾಗಿ ಈ ಶೋಷಣೆ ಮತ್ತು ಅವಮಾನ ಸಹಿಸಲಾಗದೆ ಪುಟ್ಟ ಕಂದಮ್ಮಗಳನ್ನು ಭಾವಿಗೆಸೆದು ಅಥವಾ ಅವುಗಳಿಗೆ ವಿಷ ನೀಡಿ ತಾನೂ ಆತ್ಮಹತ್ಯೆಗಯ್ಯುವ ಮಹಿಳೆಯರ ಸುದ್ದಿ ದಿನ ನಿತ್ಯವೂ ಪತ್ರಿಕೆಗಳಲ್ಲಿ ವರದಿಯಾಗುತ್ತಲೇ ಇವೆ. ಓರ್ವ ತಾಯಿ ತನ್ನ ಕೈಯಾರೆ ತನ್ನ ಮಕ್ಕಳನ್ನು ಈ ರೀತಿ ಕೊಲೆ ಮಾಡಬೇಕಾದರೆ ಆಕೆ ಆ ಬದುಕಿನಲ್ಲಿ ಎಷ್ಟೊಂದು ಯಾತನೆಯನ್ನು ತನ್ನ ಕುಟುಂಬದಿಂದ, ಹೆಚ್ಚಿನ ಸಂದರ್ಭದಲ್ಲಿ ತನ್ನ ಗಂಡನಿಂದ ಅನುಭವಿಸಿರಬಹುದು ಎಂಬುದನ್ನು ಒಮ್ಮೆ ಯೋಚಿಸಿ ನೋಡಿ. ಇಂತಹ ಈ ಮಹಿಳೆಯರನ್ನು ಈ ಕಾದಂಬರಿಯಲ್ಲಿ ಬೆಂಬಲಿಸಿದಂತಹ ಮಾಲಾಕೆರೂರ, ಚಿತ್ರಾ ಹೊಸೂರ ಎಂಬ ನ್ಯಾಯಾವಾದಿಗಳ ಬಳಿಗೆ ಕರೆದೊಯ್ಯುವವರು ಯಾರಾದರೂ ಇದ್ದಾರೆಯೇ? ಅವರಿಗೆ ಸಂಭಾವನೆ ಕೊಡಲು ಸಾವಿರ ಗಟ್ಟಲೆ ಹಣ ಅವರ ಕೈಯಲ್ಲಿದ್ದಿದ್ದರೆ ಅವರು ತಮ್ಮ ಈ ಕಂದಮ್ಮಗಳನ್ನು ಹೇಗಾದರೂ ಬದುಕಿಸಿಕೊಳ್ಳುತ್ತಿದ್ದರೆಂದೆನ್ನಿಸುವು ದಿಲ್ಲವೇ? ಬಡವರ ಕುರಿತು ಯಾವುದೇ ಕಾಳಜಿ ಇಲ್ಲದೆ ಸಂಸ್ಕೃತಿ ರಕ್ಷಕರ ಚಿಂತನೆಯನ್ನೇ ಮೈಗೂಡಿಸಿಕೊಂಡ ಭೈರಪ್ಪನವರಲ್ಲಿ ಹೃದಯವಂತಿಕೆ ಎಂಬುದು ಪೂರ್ತಿನಾಶವಾಗಿದೆಯೇ?

ಜಯಕುಮಾರನೆಂಬ ಓರ್ವ ಇಂಜಿನಿಯರ್, ಬಹಳ ದೊಡ್ಡ ಕೈಗಾರಿಕಾ ಸಂಸ್ಥೆ ನಡೆಸುತ್ತಾ, ಕೋಟಿಗಟ್ಟಲೆ ಹಣದ ವ್ಯವಹಾರ ನಡೆಸುವವನು. ಅಂತಹವನಿಗೆ ಓರ್ವ ಮಹಿಳೆಯೊಡನೆ ಕೂಡಿಕೊಳ್ಳುವಾಗ, ಭೈರಪ್ಪನವರ ಮಾತಿನಲ್ಲೇ ಹೇಳುವಂತೆ 'ದೇಹಬಾಧೆ ತೀರಿಸಿಕೊಳ್ಳುವಾಗ' ಅದರ ಪರಿಣಾಮವೇನಾಗಬಹುದು ಎಂಬುದನ್ನು ಒಂದು ನಿಮಿಷವೂ ಯೋಚಿಸಲಾಗಲಿಲ್ಲವೇ? ಅಥವಾ ದೇಹಬಾಧೆ ತೀರಿಸುವ ಅವಸರದಲ್ಲಿ ಎಲ್ಲವೂ ಮರೆತು ಹೋಯಿತೇ? ತಾನು ಕರೆದೊಡನೆ ತನ್ನ ಪಿ.ಎ. ತನ್ನನ್ನು ಹಿಂಬಾಲಿಸಿ ತನ್ನ ಶಯನಕೊಠಡಿಗೆ ಬಂದು ತನ್ನೊಡನೆ ಮಲಗಿ ತನ್ನ ದೇಹಬಾಧೆ ತೀರಿಸಿ ಹೊರಟು ಹೋಗಬೇಕು; ಅದರ ಪರಿಣಾಮದ ಜವಾಬ್ದಾರಿಯನ್ನು ಅವಳೇ ಹೊತ್ತುಕೊಳ್ಳಬೇಕು ಎಂಬುದು ಶ್ರೀಮಂತ ಪುರುಷರ ಮನೋಭಾವ ವಾಗಿರಬಹುದು. ಇಂದಿನ ಎಚ್ಚೆತ್ತ ಮಹಿಳೆಯರೂ ಅಂತಹ ಪುರುಷರಿಗೆ ಹೇಗೆ ಪಾಠ ಕಲಿಸಬೇಕು ಎಂಬುದನ್ನು ಕರಗತಮಾಡಿ ಕೊಳ್ಳ ಲಾರಂಭಿಸಿದ್ದಾರೆ. ತನ್ನ ದೇಹಬಾಧೆ ತೀರಿಸಲು ಕರೆದೊಡನೆ ತನ್ನ ಶಯನ ಕೊಠಡಿಗೆ ಬಂದ ಓರ್ವ ಹೆಣ್ಣಿನಲ್ಲಿ ಅಷ್ಟೊಂದು ವಿಶ್ವಾಸವೇ ಅಥವಾ ಆಕೆಯ ಮಾತುಗಳನ್ನು ಕಣ್ಣು ಮುಚ್ಚಿನಂಬುವಷ್ಟು ಹೆಡ್ಡನೇ ಈ ಇಂಜಿನಿಯರ್? ಮುಂದೆ ಆತನ ಎಲ್ಲಾ ಬೀಳುವಿಕೆಗೂ ಆಕೆಯೇ ಕಾರಣ ಎಂದು ಎಲ್ಲರನ್ನೂ ನಂಬಿಸಹೊರಟಿದ್ದಾರೆ ಭೈರಪ್ಪ. ಮಹಿಳೆಯರನ್ನು ಇಷ್ಟು ಕೆಟ್ಟದಾಗಿ ಬಿಂಬಿಸಿದರೆ ನಾಳೆ ಮಹಿಳೆಯರು ತಗಾದೆ ಮಾಡಬಹುದೆಂದೊ ಏನೊ ಜಯಕುಮಾರ ತನ್ನ ಸತ್ತ ಹೆಂಡತಿಯನ್ನು ಯಾವಾಗಲೂ ಹೊಗಳುತ್ತಿರುತ್ತಾನೆ. ನಮ್ಮಲ್ಲಿ ಒಂದು ಗಾದೆ ಇದೆ. 'ಸತ್ತ ಎಮ್ಮೆಗೆ ಹತ್ತು ಕುತ್ತಿ ಹಾಲು' ಎಂಬುದು. ಅರ್ಥವಾಯಿತಲ್ಲ?

ಕತ್ತು, ಹಣೆ, ಕಿವಿ, ಕೈ ಬರಿದಾಗಿರುವವರೆಂದರೆ ಭೈರಪ್ಪನವರಿಗೆ ಅಲರ್ಜಿ! ಹೆಣ್ಣೆಂದರೆ ಗಂಡನ ಕಣ್ಣಿಗೆ ಹಿತವಾಗುವಂತೆ ಕತ್ತು, ಮೂಗು, ಕಿವಿ, ಕೈಗಳಿಗೆ ಒಡವೆ ತೊಟ್ಟುಕೊಂಡು, ತಲೆಬಾಚಿ ಜಡೆಹೆಣೆದು,

ಹೂ ಮುಡಿದುಕೊಂಡು ಗಂಡನ ಬರವನ್ನೆದುರು ನೋಡುತ್ತಾ ಆತನ 'ದೇಹ ಬಾಧೆ' ತೀರಿಸಲು ಸಿದ್ಧಳಾಗಿ ನಿಂತಿರಬೇಕು! ಅದಕ್ಕೆಂದೇ ಕೊನೆಗೆ ಆತನ ಮಂದಬುದ್ಧಿಯ ಮಗಳನ್ನು ಅಮೆರಿಕಾ ಬಿಟ್ಟು ಬಂದ ಅಳಿಯನಿಗೆ ಕೊಟ್ಟು ಮದುವೆ ಮಾಡುತ್ತಾನೆ. ಅಮೆರಿಕಾದಲ್ಲಿ ಎರಡು ಮಕ್ಕಳ ತಾಯಿಯನ್ನು ಕಟ್ಟಿಕೊಂಡು ಅಲ್ಲಿ ಆಕೆಯಿಂದಾಗಿ ಎಲ್ಲವನ್ನೂ ಕಳೆದುಕೊಂಡು ಊರಿಗೆ ಹಿಂತಿರುಗಿದವನು ಈ ಅಳಿಯ! ಅಮೆರಿಕಾದಲ್ಲಿ ಕೆಲವು ವರ್ಷ ಬದುಕಿ ಬಾಳಿ ಓರ್ವ ಹೆಣ್ಣಿನೊಡನೆ ಕೆಲವು ಕಾಲ ಬದುಕಿದವನಿಗೆ ಇನ್ನೋರ್ವ ಹೆಣ್ಣನ್ನು, ಅಮೆರಿಕಾದ ಕಾನೂನುಗಳನ್ನು ಅರ್ಥ ಮಾಡಿಕೊಳ್ಳಲು ಸಾಧ್ಯವಿರಲಿಲ್ಲವೇ? ಹೆಣ್ಣಿನ ತಾಯ್ತನವನ್ನೂ ಗಂಡಸರಿಂದ ಅರ್ಥ ಮಾಡಿಕೊಳ್ಳಲು ಸಾಧ್ಯ ವಾಗುತ್ತಿಲ್ಲವಲ್ಲಾ? ಓರ್ವ ತಾಯಿ ತನ್ನ ಮಕ್ಕಳನ್ನು ಬೋರ್ಡಿಂಗ್‌ನಲ್ಲಿ ಬಿಟ್ಟು, ತನ್ನ ಸುಖ ಸೌಕರ್ಯ ನೋಡಿಕೊಂಡು ತನ್ನ ಜೊತೆಗೆ ಬದುಕಬೇಕೆಂದು ಓರ್ವ ಪುರುಷ ನಿರೀಕ್ಷಿಸಿದ್ದು ಹೇಗೆ? ಯಾವುದೇ ತಾಯಿಗೆ ಇತರ ಎಲ್ಲಾ ಸೌಕರ್ಯ, ಸುಖ ಸಂತೋಷಗಳಿಗಿಂತಲೂ ತನ್ನ ಮಕ್ಕಳ ಭವಿಷ್ಯ ಬಹಳ ಮುಖ್ಯವಾಗಿರುತ್ತದೆ.

ವಿಶ್ವವಿದ್ಯಾಲಯದ ಪ್ರಾಧ್ಯಾಪಕಿಯೋರ್ವಳು ತನ್ನ ನೌಕರಿ ಬಿಟ್ಟು ಪ್ರತಿ ತಿಂಗಳೂ ಲಕ್ಷಗಟ್ಟಲೆ ಹಣ ಸಂಪಾದಿಸುವ ವಿದೇಶಿ ಕಂಪೆನಿಯ ನಿರ್ದೇಶಕನ ಸ್ಥಾನ ವಹಿಸುವ ಗಂಡನೊಡನೆ ಹೊರಡಲಿಲ್ಲ. ಆತನ ಮನೆಯಲ್ಲಿ ವಿದೇಶಿ ಗಣ್ಯರು ಮತ್ತಿತರರಿಗೆ ಆತಿಥ್ಯ ನೀಡುವಾಗ ಆಕೆ ಆತಿಥೇಯಳಾಗಿ ಅವರನ್ನು ಸ್ವಾಗತಿಸಿ ಬಳಿಕ ಒಳಗೆ ಹೋಗಬಹುದೆನ್ನುತ್ತಾನೆ ಆ ಗಂಡ. ಅವನಿಗೆ ಈ ಕಾರ್ಯಕ್ಕಾಗಿ ಹೆಂಡತಿಯ ಅಗತ್ಯವಿತ್ತು. ಅದಕ್ಕಾಗಿ ಆಕೆ ವಿಶ್ವವಿದ್ಯಾಲಯದ ಪ್ರಾಧ್ಯಾಪಕಿಯ ಕೆಲಸ ಬಿಟ್ಟು ಆತನ ಹಿಂದೆ ಹೋಗಬೇಕಾಗಿತ್ತು, ಆ ಬಳಿಕ ಆಕೆಯನ್ನು ಎಷ್ಟು ಕೆಟ್ಟದಾಗಿ ಬಿಂಬಿಸ ಲಾಗಿದೆಯೆಂದರೆ ಆಕೆ ಓರ್ವ ರಾಜಕಾರಣಿಯ ತೋಟದ ಮನೆಯಲ್ಲಿ ಆತನ ಉಪಪತ್ನಿಯಂತೆ ಬದುಕಲು ಸಿದ್ಧಳಾದಳು ಎಂಬಂತೆ ಚಿತ್ರಿಸ ಲಾಯಿತು. ಸಲಿಂಗರತಿ ಮತ್ತು ಮೇಲ್ವರ್ಗದ ಮಹಿಳೆಯರ ಹಾದರದ ಕತೆಗಳೇ ಕಾದಂಬರಿಯಲ್ಲಿ ತುಂಬಿಕೊಂಡಿವೆ.

ನಮ್ಮ ಭಾರತೀಯಸಂಸ್ಕೃತಿ ಎಂದು ಯಾವರೀತಿ ಹೆಮ್ಮೆ ಪಡಲಾಗುತ್ತಿತ್ತೊ ಆ ಸಂಸ್ಕೃತಿ ನೆಲ ಕಚ್ಚುತ್ತಿರುವುದರ ಒಂದು ಚಿತ್ರಣವೆಂದು ಕೊಂಡು ಆ ಸಂಸ್ಕೃತಿಯನ್ನು ಕೆಸರಿನಲ್ಲಿ ಅದ್ದಿದ್ದಾರೆ ಭೈರಪ್ಪನವರು. ●

---

# ಪುರುಷ ಅಹಮಿಕೆಯ ಆಘಾತ-ತಲ್ಲಣಗಳು

■ *ಚಂದ್ರಕಲಾ ನಂದಾವರ*

ಅಖಿಲ ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು ಇವರು ಬೆಂಗಳೂರಿನಲ್ಲಿ ನಡೆಸಿದ ಐದನೆಯ ಅ.ಕ. ಲೇಖಕಿಯರ ಸಮ್ಮೇಳನದಲ್ಲಿ ಪುರುಷ ಸಾಹಿತಿಗಳಿಗೂ ವೇದಿಕೆಯಲ್ಲಿ ಅವಕಾಶ ಕಲ್ಪಿಸಲಾಗಿತ್ತು. ಉದ್ಘಾಟನಾ ಸಮಾರಂಭದಲ್ಲಿ ಲೇಖಕಿಯರ ಆತ್ಮಕಥನಗಳ ಸಂಗ್ರಹ "ಲೇಖಲೋಕ-4"ರ ಬಿಡುಗಡೆ ಎಸ್.ಎಲ್. ಭೈರಪ್ಪನವರಿಂದ. ಕೃತಿ ಬಿಡುಗಡೆ ಮಾಡಿದ ಲೇಖಕರು ಆ ಕೃತಿ ಬಗ್ಗೆ ಏನೂ ಹೇಳದೆ ಮಹಿಳಾ ಸಾಹಿತ್ಯವನ್ನು ಒಟ್ಟಾಗಿ ಅಲಕ್ಷಿಸಿ ಲೇಖಕಿಯರ ಸಂಘ ಬರಹಗಾರ್ತಿಯರಿಗೆ, ಭಾಷೆ, ವ್ಯಾಕರಣ, ಛಂದಸ್ಸು, ಬರಹದ ತಂತ್ರಗಾರಿಕೆಗಳ ಬಗ್ಗೆ ಕಮ್ಮಟ, ಶಿಬಿರಗಳನ್ನು ನಡೆಸಬೇಕೆಂಬ ಆದೇಶ ನೀಡಿದರು. ಮುಂದಿನ ಮಾತು ಗಳನ್ನಾಡಬೇಕಾದ ಸಂದರ್ಭಗಳಲ್ಲಿ ಹೆಚ್ಚಿನ ಎಲ್ಲಾ ಲೇಖಕಿಯರೂ ಭೈರಪ್ಪನವರ ಹೇಳಿಕೆಗಳನ್ನು ಪ್ರತಿಭಟಿಸುವಂತಹ ಮಾತು ಗಳನ್ನಾಡಿದರು ನಾನೂ ಸೇರಿಕೊಂಡಂತೆ.

ಇದಿಷ್ಟು ಪೀಠಿಕೆ ಯಾಕೆಂದರೆ ಕಾದಂಬರಿ ಕ್ಷೇತ್ರದ ಅನನ್ಯ ಬರಹಗಾರರಾಗಿ ಅವರ ಪ್ರಾರಂಭದ ಕೃತಿಗಳನ್ನು ಸ್ವೀಕರಿಸಿದ ನಮಗೆ 'ಆವರಣ' ಪ್ರಕಟವಾದಾಗ ಭೈರಪ್ಪನವರು ತಮ್ಮ ಬುದ್ಧಿಮತ್ತೆಯನ್ನು ಪುರೋಹಿತಶಾಹಿಗಳಿಗೆ ಒತ್ತೆಯಿಟ್ಟಿದ್ದಾರೆ ಎಂದು ಅನ್ನಿಸಿತ್ತು. ಇದೀಗ ಅದೇ ಪುರೋಹಿತಶಾಹಿ ವ್ಯವಸ್ಥೆ ವರ್ತಮಾನ ಕಾಲದ ಎಲ್ಲಾ ಲಾಭಗಳನ್ನೂ ಅನುಕೂಲಗಳನ್ನೂ ಪಡೆದುಕೊಂಡು (ಸ್ತ್ರೀ ಶಿಕ್ಷಣ, ವಿಧವಾವಿವಾಹ, ಉದ್ಯೋಗ ಸಾಧ್ಯತೆಗಳನ್ನು) ಮನೆಯೊಳಗೆ, ಹೊರಗೆ ದುಡಿದು ಕುಟುಂಬ ಸಂರಕ್ಷಣೆಯೊಂದಿಗೆ ಲೋಕಜ್ಞಾನ ವನ್ನೂ ಪಡೆದು ತನ್ನ ಅಸ್ತಿತ್ವವನ್ನು ರೂಪಿಸ ಹೊರಟ ಮಹಿಳೆಯರ ಬಗ್ಗೆ ಕೆಂಗಣ್ಣ ನೋಟ ಹರಿಸುತ್ತಿದೆ. ಮಹಿಳೆಯರು ಎತ್ತಿರುವ ಪ್ರಶ್ನೆಗಳಿಗೆ, ನಡೆಸುವ ಹೋರಾಟಗಳಿಗೆ ನಾವೇ ಹೆಸರಿಸಿಕೊಂಡಂತೆ ಮಹಿಳಾ ವಿಮೋಚನಾ ಚಳವಳಿ, ಮಹಿಳಾ ಸಾಹಿತ್ಯ ಎನ್ನುವ ಸ್ತ್ರೀವಾದಿ ನೆಲೆಯನ್ನು ಸಹಿಸಲು ಅವರಿಗೆ ಸಾಧ್ಯವಾಗುತ್ತಿಲ್ಲ. ಸ್ತ್ರೀವಾದ ಎನ್ನುವುದು ಪಾಶ್ಚಾತ್ಯ ಓದಿನಿಂದ ಪಡೆದುಕೊಂಡದ್ದು ಎಂಬ ಸರಳ ವ್ಯಾಖ್ಯಾನದೊಂದಿಗೆ ಹಿಂದುತ್ವದ ದೇಶೀಯವಾದದ ಹಿನ್ನೆಲೆಯಲ್ಲಿ ಪೂರ್ವಾಗ್ರಹ ಪೀಡಿತರಾಗಿ 'ಕವಲು' ಕೃತಿಯನ್ನು ಹಿಂದುತ್ವ ವಾದಿಗಳೊಂದಿಗೆ ಶಾಮೀಲಾಗಿರುವ ಎಸ್.ಎಲ್. ಭೈರಪ್ಪ ಪ್ರಕಟಿಸಿದ್ದಾರೆ. ಸಾಹಿತ್ಯದ ವಿದ್ಯಾರ್ಥಿಯಾಗಿ, ಕಾದಂಬರಿಗಳ ಓದುಗಳಾಗಿ 'ಕವಲು' ಕೃತಿಯನ್ನು ಕಾದಂಬರಿ ಎಂದು ಹೇಳಲು ಮನಸ್ಸು ಒಪ್ಪುತ್ತಿಲ್ಲ, ಈ ಕೃತಿಯ ಉದ್ದೇಶ ಏನೇ ಇರಲಿ, ಅದು ಎಷ್ಟೇ ಮುದ್ರಣದ ಅವಕಾಶಗಳನ್ನು ಪಡೆದುಕೊಂಡರೂ ಮಹಿಳೆಯರು ತಮ್ಮ ಅಸ್ತಿತ್ವಕ್ಕೆ ನಡೆಸಿದ ಹೋರಾಟ, ಅಧ್ಯಯನ ಮತ್ತು ರಚಿಸಿದ ಸಾಹಿತ್ಯ ಇವು ಶಕ್ತಿಶಾಲಿ ಮಾತ್ರವಲ್ಲ ವಾಸ್ತವಿಕ ಸತ್ಯ ಎನ್ನುವ ಪ್ರಖರತೆಯೇ ಪುರುಷ ಪ್ರಧಾನ ಚಿಂತಕರಿಗೆ ಸಹಿಸಲು ಸಾಧ್ಯವಾಗುತ್ತಿಲ್ಲ ಎನ್ನುವುದಕ್ಕೆ 'ಕವಲು' ಕೃತಿ ಹಾಗೂ ಅದರ ಪ್ರಕಟಣೆಗಳು ಸಾಕ್ಷಿಯಾಗಿವೆ. ಈ ರೀತಿಯ ಆಲೋಚನೆ ಸ್ತ್ರೀವಾದಿಯಲ್ಲದ ಸಾಮಾನ್ಯ ಓದುಗರಿಗೂ ಮೇಲ್ನೋಟಕ್ಕೇ ಅರ್ಥವಾಗುವಷ್ಟು ಅಶ್ಲೀಲ, ಅಸಭ್ಯ ಭಾಷೆ ಇಲ್ಲಿ ಕೆಲಸ ಮಾಡಿದೆ.

ಇನ್ನು ಕಾದಂಬರಿಯೆನ್ನುವ ಹಣೆಪಟ್ಟಿಯ ಈ 'ಕವಲು' ಕೃತಿಯಲ್ಲಿ ಪ್ರಾರಂಭದ ಓದಿಗೇ ಪೂರ್ವಾಗ್ರಹ ಪೀಡಿತ ಮನಸ್ಸಿನ ಅಭಿವ್ಯಕ್ತಿ ಇದೆ. ಹೆಣ್ಣನ್ನು ಒಂದು 'ಅಧಿಕಾರ'ದ ಸಮವಸ್ತ್ರದೊಳಗೆ ನೋಡಲು ಸಾಧ್ಯವಾಗದ ಅಸಹನೆ ಮತ್ತು ಹೆಣ್ಣು ಅಂದರೆ ಕಾಮಕ್ಕೇ ಮೀಸಲಾದ ದೇಹವನ್ನಾಗಿಯೇ ಗ್ರಹಿಸುವ ಪುರುಷ ಕಾಮುಕ ಮನಸ್ಸಿನ ಆಲೋಚನಾ ಲಹರಿ ಮತ್ತು ಭಾಷೆ ಇಲ್ಲಿ ನಿಚ್ಚಳವಾಗಿ ಎದ್ದು ಕಾಣುತ್ತದೆ. ಇಂದಿನ ಸಂವಿಧಾನಬದ್ಧ ಸಮಾನತೆಯ ಅರಿವು ಇಲ್ಲದ, ಒಬ್ಬ ಸಾಮಾನ್ಯ ಲೋಕಜ್ಞಾನಕ್ಕೆ ಎಟುಕಬಹುದಾದ ವಾಸ್ತವದ ಅರಿವೂ ಇಲ್ಲವಾಗಿದೆ. ಪ್ರಜಾಪ್ರಭುತ್ವ ವ್ಯವಸ್ಥೆಯೊಳಗಿನ ಆರಕ್ಷಕ ಇಲಾಖೆಯ ಅಧಿಕಾರಸ್ಥಾನವನ್ನು ಅಪಮಾನಿಸುವ ಅಗೌರವದ ಭಾಷೆ (ಅಧ್ಯಾಯ 1-ಪುಟ9ರಿಂದ 11) ಒಬ್ಬ ನಾಗರಿಕನಿಗೇ ಸಲ್ಲದು. ಹಾಗಿರುವಾಗ ಬದುಕಿಗೆ ಬದ್ಧನಾದ ಸಾಹಿತಿಯ ಲೇಖನಿ ಹೀಗೆ ಬರೆಯಲು ಕಾರಣ ಏನು? ಸಮವಸ್ತ್ರದೊಳಗಿನ ದೇಹ ಹೆಣ್ಣಾಗಿರುವುದೆ ಅಪರಾಧ ಎನ್ನುವ ಪೂರ್ವಾಗ್ರಹಗಳಿಂದಲೇ ಈ 'ಕಾದಂಬರಿ' ಎನ್ನುವ ಕಾದಂಬರಿಯ ಪ್ರಾರಂಭ.

ಹೆಣ್ಣೊಬ್ಬಳು ಸ್ತ್ರೀ ಮುಕ್ತಿ, ಸ್ತ್ರೀ ವಿಮೋಚನೆಯ ಪುಸ್ತಕ ಓದುತ್ತಾಳೆ ಎಂದ ಮಾತ್ರಕ್ಕೆ ಆಕೆ ಮುಕ್ತ ಲೈಂಗಿಕತೆಯ ಪರವಾದವಳು ಎಂದು ಭಾವಿಸುವ ಬುದ್ಧಿಗೇಡಿತನ ಒಬ್ಬ ಸಾಮಾನ್ಯ ಪುರುಷನಿಗೂ ಸಾಧ್ಯವಾಗದ್ದು. ಅಂತಹುದರಲ್ಲಿ ವಿದ್ಯಾವಂತ ಶ್ರೀಮಂತ ಉದ್ಯಮಿ ಭಾವಿಸುವ ಅವಿವೇಕತನ, ತನ್ನ ಕಾಮ ತೃಷೆ ತೀರಿಸಿಕೊಳ್ಳಲು ಕರೆಯುವುದು. ಆ ವೇಳೆಯ ಮನಸ್ಸಿನ ಗೊಂದಲಗಳಿಗೆ ಗಂಡಾಗಿಯೇ ಕಂಡುಕೊಳ್ಳುವ ಪುರುಷ ಮನಸ್ಸಿನ ಸಮರ್ಥನೆಗಳು ಮತ್ತು ಹೆಣ್ಣು ಕೂಡಾ ಹಾಗೆಯೇ ಪರಿಭಾವಿಸಿಕೊಳ್ಳಬೇಕು, ಅಥವಾ ಪರಿಭಾವಿಸಿಕೊಳ್ಳುತ್ತಾಳೆ ಎಂದು ತನ್ನನ್ನು ತಾನೇ ಸಮಾಧಾನಿಸಿ ಕೊಳ್ಳುವ ಅತಿರೇಕ ಇಲ್ಲಿದೆ. ಆಕೆಯನ್ನು ಉಪಯೋಗಿಸಿಕೊಂಡ ಬಳಿಕ ಆಕೆಯ ವರ್ತನೆಯನ್ನು ವಿಶ್ಲೇಷಿಸುವ ತರ್ಕ ಅನುಭವಜನ್ಯವಾಗಿಲ್ಲ. ಎಲ್ಲವೂ ಪೂರ್ವಾಗ್ರಹ, ಅನುಮಾನಗಳೇ ಆಗಿವೆ. ಕಾದಂಬರಿಕಾರರ ರಚನೆಯ ಹಿಂದಿರುವ ಉದ್ದೇಶದಲ್ಲಿ ಮಾನವೀಯತೆ, ಸದುದ್ದೇಶಗಳಿಲ್ಲದಿರುವುದಕ್ಕೆ ಸುಳುಹು ದೊರೆತು ಕಾದಂಬರಿ ಓದಿಸಿಕೊಂಡು ಹೋಗುವಲ್ಲಿ ವಿಫಲ ವಾಗುತ್ತದೆ. ಹಾಗೆಯೇ "ಭ್ರೂಣಹತ್ಯೆಮಾಡು" ಎನ್ನುವ ಅಸಾಂವಿಧಾನಿಕ ಸಂದೇಶ ನೀಡುವುದು ಸಮಾಜದ್ರೋಹಿ ಚಿಂತನೆಯಾಗಿದೆ. ಹಾಗಿದ್ದರೂ ಈ ಕೃತಿ ಹಲವು ಪ್ರಕಟಣೆಗಳ ಸಾಧನೆ ಮಾಡುತ್ತಿದೆ ಎನ್ನುವ ಪ್ರಚಾರದ ಹಿನ್ನೆಲೆಯೂ ಒಂದು ಹುನ್ನಾರವಾಗಿಯೇ ಗೋಚರವಾಗುತ್ತದೆ. ಇಂತಹ ವಿಕೃತಮನಸ್ಸುಗಳ ಪುರುಷ ಆಲೋಚನೆಯ ತೆಕ್ಕೆಯೊಳಗೆ ಹದಿಹರೆಯ ದವರಿಂದ ಮೊದಲ್ಗೊಂಡು ಮುದಿಹರೆಯದ ಚಪಲ ಚೆನ್ನಿಗರು ಈ ಕೃತಿಯನ್ನು ಖರೀದಿಸುತ್ತಿರಬಹುದು.

ಧರ್ಮ, ಶಾಸ್ತ್ರ, ರೂಢಿಗಳೆಂಬ ಸಂಕೋಲೆಗಳಿಂದ ಅಮಾನುಷವಾಗಿ ನಡೆಸಿಕೊಂಡು ಬಂದ ಪರಂಪರೆಯಲ್ಲಿ ಇಂದು ಹೆಣ್ಣು (ಕೇವಲ 0.1%ರಷ್ಟು ಮಂದಿ) ವಿದ್ಯಾವಂತೆಯಾಗಿ, ಅಧಿಕಾರಿಯಾಗಿ ಸ್ಥಾನಗಳನ್ನು ನಿರ್ವಹಿಸು ತ್ತಿದ್ದಾಳೆ. ಅನ್ಯಾಯಕ್ಕೊಳಗಾದ ಇತರ ಹೆಣ್ಣು ಮಕ್ಕಳ ಬದುಕು ಕಟ್ಟುವಲ್ಲಿ ನ್ಯಾಯಯುತ ಹೋರಾಟಗಾರ್ತಿಯಾಗಿ, ಕಾನೂನಿನ ಹಿನ್ನೆಲೆಯಲ್ಲಿ ನ್ಯಾಯ ನೀಡುವ ನ್ಯಾಯಧೀಶೆಯಾಗಿ ಒಟ್ಟು ಸಾಮಾಜಿಕ ಜೀವನದಲ್ಲಿ ಮಾನವೀಯತೆ ಯನ್ನು ಮೆರೆಯುವ ಕಾರ್ಯಮಾಡುತ್ತಾಳೆ. ಆದರೆ ಕೃತಿಯಲ್ಲಿ ಹೆಣ್ಣಿನ ಬಾಹ್ಯವೇಷ, ದೇಹಗಳಷ್ಟನ್ನೇ ಗ್ರಹಿಸುವ ಪುರುಷರ ಮಿತಿಯ ಚಿತ್ರಣಗಳಷ್ಟನ್ನೇ ಕಾದಂಬರಿಯಲ್ಲಿ ಅಭಿವ್ಯಕ್ತಿಗೊಳಿಸಿ ಪುರುಷ ದೇಹದೊಳಗಿನ ಮಾನವೀಯ, ಅನುಕಂಪ, ಆತ್ಮೀಯತೆ, ಕರುಣೆ ಎನ್ನುವ ಮೌಲ್ಯಗಳಿಗೆ ಬೆಲೆ ಇಲ್ಲ ವಾಗಿಸಲಾಗಿದೆ. ದೇಹಗಳನ್ನು ಮೀರಿದ, ಕಾಮವನ್ನು ದಾಟುವ, ಆತ್ಮಾನುಸಂಧಾನದ-ಪ್ರೇಮದ ದಾಂಪತ್ಯವನ್ನು ಸಕಾರಾತ್ಮವಾಗಿಸದ ಈ ಕಾದಂಬರಿ ಎಂತಹ ಸತ್ಯ, ಸೌಂದರ್ಯಗಳನ್ನು ಸಾಹಿತ್ಯದ ಮೂಲಕ ನೀಡುವ ತಾತ್ವಿಕತೆಯನ್ನು ಹೊಂದಿದೆ ಎನ್ನುವುದೇ ಪ್ರಶ್ನೆ.

ಸೃಷ್ಟಿಗೆ ಮೂಲವಾದ ಸಂಭೋಗವನ್ನು "ಶಯನ"ಕ್ಕಷ್ಟೇ ಸೀಮಿತ ಗೊಳಿಸಲಾಗಿದೆ. ಹೆಣ್ಣಿನ ಬಸಿರು, ಬಸುರಿ ಹೆಣ್ಣಿನ ಕಾಂತಿಯ ವರ್ಣನೆ, ವಿವರಣೆ, ವ್ಯಾಖ್ಯಾನ ಎಲ್ಲವೂ ವ್ಯಂಗ್ಯಗಳ ಮೂಟೆ. ಹೆಣ್ಣಿನ ಕುಂಕುಮವಿಲ್ಲದ ಹಣೆ, ಹೂವಿಲ್ಲದ ಮುಡಿ, ಮಾಂಗಲ್ಯವಿಲ್ಲದ ಕೊರಳು, ಬಳೆಗಳಿಲ್ಲದ ಕೈಗಳು ಕಾದಂಬರಿಕಾರರಿಗೆ ಬಹಳ ಮುಜುಗರ ಮೂಡಿಸುವ ಅಂಶಗಳಾಗಿ ಪದೇ ಪದೇ ಉಲ್ಲೇಖಗೊಳ್ಳುತ್ತಾ ಇರುತ್ತವೆ. ಈ ಹಿನ್ನೆಲೆಯಲ್ಲಿ ನಮ್ಮ ಪರಂಪರೆಯಲ್ಲಿ 'ನಿತ್ಯ ಸುಮಂಗಲಿ'ಗಳಾಗಿ ಬದುಕುವ ಪರಂಪರೆ ಮುಂದು ವರಿಯಲಿ ಎಂಬ ಪರೋಕ್ಷ ಸಂದೇಶವನ್ನು ಈ ಕೃತಿ ಸಾರುತ್ತದೆಯೇ? ಮಾಲಾ ಕೆರೂರು ವಿವಾಹಿತೆಯೋ, ಅವಿವಾಹಿತೆಯೋ, ವಿಧವೆಯೋ ಎನ್ನುವುದನ್ನು ನಿಖರಗೊಳಿಸುವುದು ಸಾಧ್ಯವಿಲ್ಲ ಎನ್ನುವ ವ್ಯಂಗ್ಯದ ಹಿಂದೆ ಈ ನಿಖರತೆಯನ್ನು ಹೆಣ್ಣಿನಲ್ಲಿ ಮಾತ್ರ ನಿರೀಕ್ಷಿಸುವ ಮನಸ್ಸು ಏನನ್ನು ಸೂಚಿಸುತ್ತದೆ? "ಮಂಗಳೆಯ ಬಸಿರಲ್ಲಿ ತನ್ನ ಕಂಪೆನಿಗೆ ಉತ್ತರಾಧಿಕಾರಿ ದೊರೆಯುತ್ತಾನೆ ಎಂಬ ಸಮರ್ಥನೆ ಮನಸ್ಸಿಗೆ ತುಸುವಾದರೂ ಸಮಾಧಾನ ನೀಡಿತು" ಎನ್ನುವ ಸ್ವಾರ್ಥ ಭಾವನೆಯ, ಸಮರ್ಥನೆ ಯೊಂದಿಗಿನ ಸಾಲುಗಳ ಬಗ್ಗೆ ಏನೆನ್ನಬೇಕು? ಆ ಬಸಿರು ಹೊತ್ತ ಹೆಣ್ಣು ಹಣೆಯಲ್ಲಿ ಕುಂಕುಮವಿಲ್ಲದ, ಕೊರಳಲ್ಲಿ ಮಾಂಗಲ್ಯವಿಲ್ಲದ, ಕೈಗಳಲ್ಲಿ ಬಳೆ ಇಲ್ಲದ ಬೋಳಾದ ದೇಹದ ಸೂತಕದ ಕಳೆಯವಳಾದರೂ ಶಯನಕ್ಕೆ ಕರೆದಾಗ ಕಾಡಿದ ಭಾವಗಳು ಯಾವುವು? ಇದು ಪುರುಷ ಪ್ರಧಾನ ಚಿಂತನೆಯ ಅನುಕೂಲ ಶಾಸ್ತ್ರಕ್ಕೆ ಉದಾಹರಣೆಗಳು.

ಅಪಘಾತದಿಂದ ಬುದ್ಧಿ ಬೆಳೆಯದ ಪುಟ್ಟಕ್ಕ ಬೆಳೆದು ನಿಂತಾಗ ಜಯಕುಮಾರನ ಪುರುಷ ಮನಸ್ಸು (ತಂದೆಯ ಆಪ್ತತೆಯ ಮನಸ್ಸು ಅಲ್ಲ) "ವೈಜಯಂತಿ ಇರುತ್ತಿದ್ದರೆ ಸರ, ಕೈಗೆ ಬಳೆ, ಸೀರೆ ತಂದು ಉಡಿಸುತ್ತಿದ್ದಳು. ಅನಂತರ ಇವನ್ನೆಲ್ಲ ಪ್ರತಿದಿನವೂ ಉಟ್ಟು ತೊಟ್ಟು ಮಾಡಬೇಕೆಂಬ ಕಡ್ಡಾಯ ಹೇರದೆ" ಎನ್ನುತ್ತದೆ. ಯಾಕೆ ಕಡ್ಡಾಯ ವಾಗಿ ಮಾಡಬೇಕಿಲ್ಲ? ಎನ್ನುವುದಕ್ಕೆ ಉತ್ತರ ಮೌನ. ಆದರೆ ಅದೇ ಮಂಗಳೆ ದರಿದ್ರ ಸೂತಕದ ಕಳೆಯವಳು!

ಇಡೀ ಕಾದಂಬರಿಯುದ್ದಕ್ಕೂ ಪ್ರಜ್ಞಾವಂತ, ಪಾಶ್ಚಾತ್ಯ ಸ್ತ್ರೀವಾದದ ಪರಿಕಲ್ಪನೆ ಇಲ್ಲದ, ಹಿಂದೂಧರ್ಮದ ಪುರಾಣದ ಹಿನ್ನೆಲೆಯಲ್ಲೇ ಮುಕ್ತಲೈಂಗಿಕತೆಯ ಬಗ್ಗೆ ಚರ್ಚಿಸಲಾಗಿದೆ. ವರ್ತಮಾನದಲ್ಲಿ ವಿಮರ್ಶೆಗೊಳಗಾಗುತ್ತಿರುವ "ಲಿವಿಂಗ್‌ಟುಗೆದರ್" ಎಂಬ ಪರಿಕಲ್ಪನೆಯನ್ನೂ ಭಾರತದ ಹಿನ್ನೆಲೆಯಲ್ಲಿಯೇ ವ್ಯಾಖ್ಯಾನಿಸುವ ಸಂದರ್ಭಗಳು ಸಾಕಷ್ಟು ಇದ್ದಾಗಲೂ, ಪುರುಷರ ಸಲಿಂಗರತಿಯ ಸಂದರ್ಭಗಳು ಇಂದಿಗೂ ಪ್ರಕರಣವಾಗದೆ ಉಳಿಯುವ ಸಾಧ್ಯತೆ ಇರುವಾಗಲೂ ಮಹಿಳೆಯರ ಸಲಿಂಗರತಿ ಯನ್ನು ಉಲ್ಲೇಖಿಸುತ್ತಾ ಸಾಗುವ ಈ ಕಾದಂಬರಿಯ ಅಂಶಗಳು ಯುವ ಓದುಗರಿಗೆ ಎಂತಹ ಸಂದೇಶ ನೀಡಬಹುದು? ಕಾದಂಬರಿ ಒಂದು ಸಾಮಾಜಿಕ ಸ್ಥಿತ್ಯಂತರದ ವಾಸ್ತವಿಕ ಚಿತ್ರಣ ಎಂಬುದೂ ಪೂರ್ಣ ಸತ್ಯವಲ್ಲ.

ವ್ಯಾಸರ ಭಾರತದ ಕುರಿತಾಗಿ ಕುತೂಹಲದಿಂದ ಕ್ಷೇತ್ರ ಅಧ್ಯಯನ ಮಾಡಿ ಬರೆದ 'ಪರ್ವ'ವೂ ಈ ಭಾರತದ ಸಾಮಾಜಿಕ ಚಿತ್ರಣ, ಸಮಾಜಶಾಸ್ತ್ರದ ಟಿಪ್ಪಣಿ ಎಂದಾದರೆ, 'ಕವಲು' ಕೃತಿಯಲ್ಲಿ ಪುರುಷನ ಅಹಮಿಕೆಗೆ ಸವಾಲಾಗಿರುವ ಪ್ರಶ್ನೆಗಳಿಗೆ ಇಲ್ಲಿಯ ಮಣ್ಣಿನಲ್ಲೇ, ಗಾಳಿಯಲ್ಲೇ, ನೀರಿನಲ್ಲೇ ಉತ್ತರಗಳು ಸಿಗಬಹುದಲ್ಲವೆ? ಸ್ತ್ರೀವಾದೀ ನೆಲೆಯಲ್ಲಿ ಬರೆಯುತ್ತಿರುವ ಬರಹಗಾರ್ತಿಯರ ಬಗ್ಗೆ, ಹೋರಾಡು ತ್ತಿರುವ ಹೋರಾಟಗಾರ್ತಿಯರ ಬಗ್ಗೆ ಎಸ್.ಎಲ್. ಭೈರಪ್ಪರನ್ನು ಕಾಡುತ್ತಿರುವ ನೋವುಗಳು, ಕೋಪ ತಾಪಗಳೇನು? ಏಕೆ? ಒಂದಂತೂ ಸತ್ಯ. ವರ್ತಮಾನದ ಸಾಮಾಜಿಕ ಸ್ಥಿತ್ಯಂತರದಲ್ಲಿ ಗಂಡನ ಅಹಮಿಕೆಗೆ ಆಘಾತವಾಗಿದೆ. ತನ್ನ ಕೌಟುಂಬಿಕ ಸ್ಥಾನ ಪಲ್ಲಟಗಳನ್ನು ಒಪ್ಪಿಕೊಳ್ಳಲೇ ಬೇಕಾದ ಅನಿವಾರ್ಯತೆಯಿಂದಾಗಿ ಆತ ಕೀಳರಿಮೆಯಲ್ಲಿ ಕಳೆದುಹೋಗುತ್ತಿದ್ದಾನೆ. ಅದರ ಪ್ರಕಟಿತ ಸ್ವರೂಪ ಈ ಕೃತಿ. ಈ ಮಾತು ಭೈರಪ್ಪನವರ ಹಾಗೆ ಕೆಲವು ಅಥವಾ ಅವರನ್ನೇ ಆಧಾರವಾಗಿಟ್ಟುಕೊಂಡು ಸಾರ್ವತ್ರೀಕರಿಸುವ ಮೂರ್ಖತನವಾಗಿಲ್ಲ. ಪರಿಸ್ಥಿತಿ ಅರ್ಥ ಮಾಡಿಕೊಂಡು ಸಹಕರಿಸುವ ಪುರುಷವರ್ಗದ ಬಗ್ಗೆ ಗೌರವ ಇದೆ. ಆದ್ದರಿಂದಲೇ ಒಂದು ವರ್ಗದ ಪುರುಷರ ಚಿಂತನೆಗಳಲ್ಲಿ ಉಂಟಾದ ಆತಂಕ, ತಲ್ಲಣಗಳಿಂದ ಸೃಷ್ಟಿಯಾದ ಭಯದ ಅಭಿವ್ಯಕ್ತಿ ಈ 'ಕವಲು' ಎನ್ನುವ ಕೃತಿ. ●

# ಉತ್ಕಟವಾದೊಂದು ಮನೋವಿಕೃತಿಯ 'ಕವಲು'

■ *ಸುನಂದಾ ಪ್ರಕಾಶ ಕಡಮೆ*

ಮನಷ್ಯರ ಕುರಿತು ಅಂತಃಕರಣವುಳ್ಳ ಪ್ರಗತಿಪರ ನಿಲುವಿನ ಯಾವುದೇ ಸಹೃದಯಿಯೂ ಈ ತರಹದ ಬರಹಗಳನ್ನು ಎಂದೂ ಓದುವುದಿಲ್ಲ. ಈ ಲೇಖನಕ್ಕೋಸ್ಕರ ಕವಲನ್ನು ಓದಬೇಕಾದ ಅನಿವಾರ್ಯತೆ ಒದಗಿ ಬಂದಿರುವದಕ್ಕೆ ನನಗೆ ಹೇಸಿಗೆ ಮತ್ತು ವಿಷಾದ ಎರಡೂ ಇದೆ. ಓದುಗರಿಗೆ ಸಹೃದಯರಿಗೆ ಬೇಕಾಗಿರುವುದು ಮುನ್ನಡೆಯಲು ಅವಶ್ಯವಾಗಿರುವ ಬೆಳಕು. ಆದರೆ ಈ ಕೃತಿಯಲ್ಲಿ ಕಾಣಿಸುವದು ಇಲ್ಲಿಯ ಪಾತ್ರಗಳು ತಂತಮ್ಮ ಬುದ್ಧಿಯಲ್ಲಿ ತುಂಬಿರುವ ಹಾಲಾಹಲವನ್ನು ಮಾತ್ರ. ಎಲ್ಲಪ್ಪಾ ಬೆಳಕು ಅಂತ ಕೇಳಿದರೆ, ಸನಾತನಿಗಳ ಅನುಯಾಯಿಯಂತೆ ಮನುವಿನ ಮುಂದೆ ಬೆಳಗುತ್ತಿರುವ ದೀಪದಂತೆ ಕಾಣುತ್ತಿರುವ ಬೆಂಕಿಯುಂಡೆಯನ್ನು ತೋರಿಸುತ್ತ ಇಲ್ಲಿಯ ಪಾತ್ರಗಳು ಅಟ್ಟಹಾಸಗೈಯುತ್ತವೆ. ಬೆಂಕಿ ಬದುಕನ್ನೂ ಮನುಷ್ಯನನ್ನೂ ಮನಸ್ಸನ್ನೂ ಸುಡುತ್ತದಪ್ಪ, ಆ ಬೆಂಕಿಯಿಂದ ಬೆಳಕನ್ನು ಬೇರ್ಪಡಿಸಿ ನಮ್ಮಂತಹ ಅಮಾಯಕರಿಗೆ ನೀಡಪ್ಪ ಅಂದರೆ 'ಪ್ರಶ್ನಿಸಬೇಡಿ' ಎಂಬ ಠೇಂಕಾರ ಬೇರೆ. ಲಂಕೇಶ ತೇಜಸ್ವಿ ಅನಂತಮೂರ್ತಿ ಚಿತ್ತಾಲರು ನಮಗೆ ಬೆಳಕನ್ನು ಕರುಣಿಸಿದವರು. ಈಗಲೂ ಇವರುಗಳನ್ನು ಓದಿಕೊಂಡಾಗಲೊಮ್ಮೆ ನಮಗೆ ಹೊಸದೊಂದೇ ಮಾಯಕ ಬೆಳಕು ಲಭಿಸುತ್ತದೆ.

ಉಪ್ಪು ಹುಳಿ ಖಾರ ಹದವಾಗಿ ಬೆರೆಸಿ ಘಮಘಮಿಸುವ ತಿಳಿಸಾರು ಮಾಡಿ ಬಡಿಸಪ್ಪ ಅಂದರೆ, ಉಣ್ಣುವ ಬಟ್ಟಲಲ್ಲಿ ಕಟು ಉಪ್ಪು ಒಂದೆಡೆ, ಹುಳಿ ಇನ್ನೊಂದೆಡೆ, ಖಾರ ಮತ್ತೊಂದೆಡೆ. ಹೀಗೆ ಬದುಕನ್ನು ಪ್ರತ್ಯೇಕಿಸಿ ಇಟ್ಟುಬಿಟ್ಟರೆ, ಬಾಯ ಹತ್ತಿರಕ್ಕೆ ಸೇರಿಸುವದಾದರೂ ಹೇಗಪ್ಪ? ನಮ್ಮಲ್ಲಿ ಸಮಾಜ ಶಾಸ್ತ್ರದ ಪ್ರ್ಯಾಕ್ಟಿಕಲ್ಲು ಮತ್ತು ಥಿಯರಿ ಅಂತ ಎರಡು ನಮೂನೆಯ ಬರವಣಿಗೆಯಿದ್ದರೆ ಇಲ್ಲಿಯ ಬರವಣಿಗೆ, ಆಯಾ ಪಾತ್ರಗಳಿಗೆ ಸರಿಯೆನಿಸಿದ ಪ್ರ್ಯಾಕ್ಟಿಕಲ್ಲು ಮಾತ್ರ. ಇಲ್ಲಿ ಬದುಕೇ ಇಲ್ಲ. ಬರೀ ವಿಚಾರವಷ್ಟೇ ಇದೆ. ಬದುಕಿನ ಥಿಯರಿಯಿಲ್ಲದ ಬರಹ ಓದುಗನನ್ನು ವಂಚಿಸುತ್ತದೆ ಎಂಬ ಕನಿಷ್ಠ ತಿಳಿವಳಿಕೆಯೂ ಇಲ್ಲವಲ್ಲಪ್ಪ. ಇದು ದೇಶ ವಿದೇಶಗಳಿಂದ ಕಲೆಹಾಕಿದ ಕೇವಲ ಮಾಹಿತಿಗಳನ್ನು ನೀಡುವ ಒಂದು ಸಂಶೋಧನಾ ಬರಹ. ಇಡೀ ಬರಹದ ತುಂಬ ಬರೀ ಬೆಡ್‌ರೂಂ ಲೋಕ. ಕೆಲವೇ ಕೆಲವು ಮುಗ್ಧ ಓದುಗರು ಅಜ್ಜ ನೆಟ್ಟ ಈ ಆಲಕ್ಕೆ ನೇಣುಹಾಕಿಕೊಳ್ಳುವ ಸನ್ನಾಹದಲ್ಲಿ ಇಂಥ ವಿಕೃತಿಗಾಗಿ ಕಾಯುತ್ತಿರುತ್ತಾರೆ. ತುಂಬ ಹಿಂದೆಯೇ ಸತ್ತ ಮತ್ತು ಸಾಯುತ್ತಲೇ ಇರುವ ಅಮಾನವೀಯ ಮೌಲ್ಯಗಳು ಕವಲಿನಲ್ಲಿ ಎತ್ತಿ ತೋರುವ ಹಾಗೆಯೇ ಅದು ಕೊಳೆತ ಮಾಂಸದ ಘಮಲಿನಿಂದ ಮೂಗು ಕಣ್ಣುಗಳನ್ನು ಮುಚ್ಚಿಕೊಂಡು ಕೂಡುವ ಸ್ಥಿತಿ ಉಂಟು ಮಾಡುತ್ತದೆ. ಇಲ್ಲಿ ನೀತಿಬೋಧಕರ ಉತ್ಕಟವಾದೊಂದು ಮನೋವಿಕೃತಿಯೇ ತುಂಬಿ ತುಳುಕುತ್ತಿದೆ.

ಇಲ್ಲಿರುವುದು ಕೇವಲ ಮಿದುಳಿಗೆ ಸಂಬಂಧಿಸಿದ ಸಂಗತಿಗಳು ಮಾತ್ರ. ಹಲವು ಬೌದ್ಧಿಕ ಚಿಂತನೆಗಳಿಂದಲೇ ಸೃಷ್ಟಿಸಬಹುದಾದಂತಹ ಇಲ್ಲಿಯ ಅನೇಕ ಕೃತಕ ಪಾತ್ರಗಳು, ಆಧುನಿಕತೆಯೆಂದು ಲೇಖಕ ಅಸಂಬದ್ಧವಾಗಿ ಗ್ರಹಿಸಿರುವ ರೀತಿಯಲ್ಲೇ ತಾವೂ ಪುಟಗಟ್ಟಲೇ ಭಾಷಣ ಮಾಡುತ್ತವೆ. ಮಹಿಳೆಯರ ಬುದ್ಧಿ ಹಾಗೂ ವಿಚಾರಗಳನ್ನು ಪ್ರತಿ ಪುಟದಲ್ಲೂ ತಮ್ಮ ಎಂದಿನ ವಿಕೃತ ಶೈಲಿ ಬಳಸಿ ಲೇವಡಿ ಮಾಡಲು ಹಾತೊರೆಯುತ್ತಿರುವಂತಿದೆ. ಒಬ್ಬ ವೃದ್ಧೆಯೆಂದು ಹೇಳಬೇಕಿದ್ದರೂ 'ಹಣೆಯಲ್ಲಿ ದೊಡ್ಡ ಕುಂಕುಮವಿದ್ದ ವೃದ್ಧೆ'ಯೆಂದೇ ಗುರುತಿಸುವ ಮನಸ್ಸೊಂದು ಮಹಿಳೆಯನ್ನು ಹನ್ನೆರಡನೇ ಶತಮಾನಕ್ಕೆ ಎಳೆದೊಯ್ದು ತನ್ನ ಮನಸ್ಸಿಗೆ ಬಂದಂತೆ ವೇದಗಳಲ್ಲಿ ಹೇಳಿದ ಶಾಸ್ತ್ರಗಳ ಪುಷ್ಟಿಯಂತೆ ಸೃಷ್ಟಿಸುತ್ತದೆ ಮತ್ತು ಸೃಷ್ಟಿಕರ್ತ ಬ್ರಹ್ಮ ತಾನೇ ಎಂಬಂತೆ ಮಹಿಳೆಗೆ ಸಂಬಂಧಪಟ್ಟ ಹಲವು ತೀರ್ಮಾನವನ್ನು ಕೊರೆಯಲು ಆರಂಭಿಸುತ್ತದೆ. ಹೆಣ್ಣು ತನ್ನ ಹಣೆಗೆ ಕುಂಕುಮವಿಟ್ಟು ಹೂ ಮುಡಿದುಕೊಂಡಿರುವದೇ ಸಾಂಸ್ಕೃತಿಕ ಮೌಲ್ಯವೆಂದು ಪ್ರತಿಪಾದಿಸುತ್ತ, ಗಂಡಸು ಹೇಳಿದಂತೆ ಕೇಳಿಕೊಂಡು ಕುನ್ನಿಯಂತೆ ಬಿದ್ದಿದ್ದರೆ ಮಾತ್ರ ಹೆಣ್ಣಿಗೆ ಮರ್ಯಾದೆ ಉಂಟೆಂಬ ತಾಕೀತು ಇಲ್ಲಿ ನಾಗರದ ವಿಷದಂತೆ ಅಡಗಿಕೊಂಡಿದೆ.

ಹಾದರ-ವ್ಯಭಿಚಾರ ಇಂತಹ ಪದಗಳನ್ನು ಹುಟ್ಟುಹಾಕಿದವರು ಇವರ ಪೂರ್ವಜರೇ ಎಂಬುದಕ್ಕೆ ಇಲ್ಲಿಯೇ ಅನೇಕ ಪುರಾವೆಗಳು ಸಿಗುತ್ತವೆ. ನಮ್ಮ ಡೈನಾಮಿಕ್ ಹೀರೋ ತೇಜಸ್ವಿಯವರು ಅದಕ್ಕೆ 'ಲೈಂಗಿಕ ಅಶಿಸ್ತು' ಅಂತ ತುಂಬ ಸರಳವಾದ ವಾಸ್ತವವಾದ ಪದ ಬಳಸಿದರು. ಗಂಡಿನ ಕಾಮವಾದರೆ ಅದು ಸಹಜ, ಅದೇ ಹೆಣ್ಣಿನದಾದರೆ ಅದು ಅಸಹಜ ಎನ್ನುವ ರೀತಿಯಲ್ಲಿ ಈ ಪುಸ್ತಕದಲ್ಲಿ ಅಕ್ಷರಗಳ ಗಲೀಜೆಬ್ಬಿಸಿದವರು ಶರಾ ಬರೆದಿರುವಂತಿದೆ. ಮರೆಯಲ್ಲಿ ನಿಂತು ಹೊಡೆಯುವ ಬಾಣ ಎಂದೂ ಪೌರುಷದ್ದಲ್ಲ ಎಂಬ ಅರಿವು ಮುಖಹೇಡಿಗಳಿಗಿದ್ದರೆ ಸಾಕು. ಈ ರೀತಿಯ ಇಬ್ಬಂದಿತನ ಅಕ್ರಮ ಸಮಾಜ ವ್ಯವಸ್ಥೆಯ ಸ್ವಾರ್ಥ ಲಾಲಸೆಗಳನ್ನು ಹೇಳುತ್ತದೆ. ಕೊಳೆತು ನಾರುವ, ಯಾವ ಕ್ರಿಯಾಶೀಲತೆಯೂ ಇಲ್ಲದ ನಿಂತ ನೀರಾಗಿರುವ ಸಂಪ್ರದಾಯವನ್ನು ಹೆಣ್ಣಿನ ಮೇಲೆ ಹೇರುವ ಒಂದು ಗಣಿತ ಸಿದ್ಧಾಂತದ ರೀತಿಯಲ್ಲಿ ಹೆಣ್ಣಿನ ಮನಸ್ಸನ್ನು, ಚರಿತ್ರೆಯನ್ನು ಕಂಡಿರುವ ಈ ಆತ್ಮವಂಚನೆಯ 'ಕವಲಿ'ನ ತುಂಬ ಅಸೂಕ್ಷ್ಮ ವಿವರಗಳೇ ತುಂಬಿವೆ. ಇಲ್ಲಿ ನಿಜವಾದ ಬದುಕಿಲ್ಲ, ಕ್ಷಣ ಕ್ಷಣವೂ ನೈಜವಾಗಿ ಉಸಿರಾಡುವ ಉತ್ಕಟವಾಗಿ ಬದುಕನ್ನು ಅನುಭವಿಸುವ ಒಂದೇ ಒಂದು ಪಾತ್ರಗಳಿಲ್ಲ. ಈ ಬರಹದ ವಸ್ತುವನ್ನು ಬೇಕಂತಲೇ ತಿರುಚಿ ತಿರುಚಿ ಅದೇ ಪ್ರೇಮ ಕಾಮದ ವ್ಯವಹಾರಕ್ಕೆ ತಂದು ಕಟ್ಟಿಹಾಕಿ ಕೊನೆಯಲ್ಲಿ ಹೆಣ್ಣನ್ನು ನಿಂದನೆಗೆ ಗುರಿಪಡಿಸುವ ಈ ದೀರ್ಘ ಬರಹದ ಪ್ರತಿಪುಟವನ್ನೂ ಮೊದಲೇ ನಿಯೋಜಿಸಿ ತಮ್ಮ ಸನಾತನಿ ಓದುಗ ವೃಂದವನ್ನು ಖುಷಿಪಡಿಸಲಷ್ಟೇ ಬರೆದಂತಿದೆ.

ಮಹಿಳಾವಾದಿಗಳೆಲ್ಲ ಅಪಾಯಕಾರಿಗಳು ಎಂಬ ಹೇಳಿಕೆಯನ್ನು ಪ್ರತಿ ಪುಟದಲ್ಲೂ ಪುಷ್ಟೀಕರಿಸುತ್ತ, ತಾವೇ ಆರಾಧಿಸುವ ಜಗನ್ಮಾತೆಯ ಭಾವಚಿತ್ರದ ಎದುರು ಕೂತು ಯಾರಿಗೂ ಅರ್ಥವಾಗದ ಶ್ಲೋಕದಲ್ಲೇ ಅವಳ ಅಂಗಸೌಷ್ಠವದ ವರ್ಣನೆಗೆ ತೊಡಗುವ ಸಂಸ್ಕೃತಿಯುಳ್ಳವರಿಗೆ ತಾಯಿ ಹೆಂಡತಿ ಮಗಳು ಮೂವರೂ ಒಂದೇ. ಇವೆಲ್ಲ ಮೂಲಭೂತವಾದದ ಅಡಿಪಾಯದ ಮಿತಿಗಳು. ರಿಂಗ್ ಮಾಸ್ಟರ್‌ನೊಬ್ಬ ಹುಲಿ ಸಿಂಹಗಳನ್ನು ಆಡಿಸುವ ಬದಲು ಕೋತಿಗಳನ್ನು ಪಳಗಿಸಿ ದೊಂಬರಾಟಕ್ಕೆ ಬಿಟ್ಟಂತೆ ಇಲ್ಲಿಯ ಪಾತ್ರಗಳು ಪ್ರತಿಪುಟದಲ್ಲೂ ಆದೇಶಕ್ಕಾಗಿ ತಮ್ಮ ನಿರ್ದೇಶಕನ ಹತ್ತಿರವೇ ನೋಡುತ್ತಿವೆ. ಲೇಖಕರು ಅನ್ನ ನೀರು ನೀಡಿ ತಮ್ಮ ಅಂಕೆಯಲ್ಲಿ ಜೀತದಾಳಾಗಿ ಇಟ್ಟುಕೊಂಡ ಪಾತ್ರಗಳು ಹೆಚ್ಚಿನದೇನನ್ನು ಹೇಳಬಲ್ಲವು? ಇಲ್ಲಿ ಲೇಖಕರು ಹಸ್ತ ಬೀಸಿ ತರುತ್ತಾರೆ ಆದರೆ ಮಾನವ ಧರ್ಮಕ್ಕೆ ಎಲ್ಲೂ ಪೆಟ್ಟೇ ಬಿದ್ದಿರುವದಿಲ್ಲ. ಇವರದು ಆರಂಭಿಕ ಪೌರುಷ. ಏನು ಹೇಳುವುದಿದ್ದರೂ ಜಯಕುಮಾರ, ಪ್ರಭಾಕರ, ವಿನಯಕುಮಾರ, ರಾಜ ಇಂಥವರ ಕುರಿತು ಯೋಚಿಸುವಾಗ ಲೇಖಕರಿಗೆ ಕೊಂಚ ಸಹಾನುಭೂತಿಯೇ. ದಿಕ್ಕು ತಪ್ಪಿದ ನಚಿಕೇತನಿಗೂ ಒಂದು ದಿಕ್ಕು! ಆದರೆ ಸಂಪ್ರದಾಯ ಮೀರಿದ ಯಾವ ಮಹಿಳಾ ಜೀವಕ್ಕೂ ಸುಖವಿಲ್ಲವೆಂಬ ಅಭೀಪ್ಸೆ ಹೊತ್ತೇ ಹುಟ್ಟಿದ ವಿಚ್ಛಿನ್ನ ಬರಹವಿದು.

ದೊಡ್ಡ ಕುಂಕುಮ. ಕಾಲು ಮುಟ್ಟಿ ನಮಸ್ಕರಿಸು, ಬಡಪಾಯಿ ಬುದ್ಧಿಮಾಂದ್ಯ ಮಗಳಿಗೆ ಕಲಿಸಿದ ಒಂಚೂರೂ ಚೆಲ್ಲದಂತೆ ಬಡಿಸುವಿಕೆ, ಅಬ್ಬಾ ಎಂಥ ಪುರುಷತ್ವ! ಗಂಡಸು ಗಂಡಸಿನಂತೆ ಕೃಷ್ಣನಂತೆ ಬದುಕಿ ಗೆಲ್ಲಬೇಕು. ರಾಮನಂತೆ ಹೆಣ್ಣಿನ ಮೇಲೆ ಮೌಢ್ಯದ ಅಂಧಕಾರದ ಅಸಹ್ಯ ನಂಬಿಕೆಗಳ ಬೇಲಿ ತೊಡಿಸಿ ಅಲ್ಲ. ತಾವು ಹಾಕಿಕೊಟ್ಟದ್ದೇ ರೈಲು ಹಳಿಯೆಂಬ ಭ್ರಮೆ. ಅದರ ಗುಂಟ ರೈಲು ಬಿಡದಿದ್ದರೆ ಖಂಡಿತ ಅಪಘಾತವೇ ಆದೀತೆಂಬ ಕುಯುಕ್ತಿಯ ಎಚ್ಚರ ಕೊಡುವಿಕೆಗಳಿಂದೇನೂ ಪ್ರಯೋಜನವಿಲ್ಲ. ಇಂಥದೆಲ್ಲ ಚಾಣಾಕ್ಷತೆಯನ್ನು ಒಂದೊಳ್ಳೆ ಅಪ್ಪಟ ಸೃಜನಶೀಲ ಬರಹಕ್ಕೆ ಬಳಸಿಕೊಂಡಿದ್ದಿದ್ದರೆ ಕನ್ನಡಕ್ಕೊಂದು ಒಳ್ಳೆಯ ಕಾದಂಬರಿಯಾದರೂ ಸಿಗುತ್ತಿತ್ತು.

ಇಲ್ಲಿ ಹತ್ತೊಂಬತ್ತನೇ ಶತಮಾನದ ಇಂಥ ವೈದಿಕ ಶಾಸ್ತ್ರ ಸಂಪ್ರದಾಯಗಳಿಂದಲೇ ನಿಯೋಜಿಸಲ್ಪಟ್ಟ ಅಶಿಕ್ಷಿತ ಗಂಡ ಸತ್ತ ಒಬ್ಬ ನಾರಿಮಣಿಯಂತೆ ಸಂಕೋಲೆಗಳನ್ನು ತೊಡಿಸುತ್ತ ತೀರ್ಮಾನಗಳನ್ನು ಕೊಡುತ್ತಾ ಹೋಗುವದು ಕೀಳು ಮನಸ್ಥಿತಿಯ ದ್ವಂದ್ವವನ್ನು ತೋರಿಸುತ್ತದೆ. ಹಲ್ಲು ಕಿತ್ತ ಹಾವಿನಂತೆ ಮಹಿಳಾ ಪಾತ್ರಗಳನ್ನು ತಮ್ಮ ಜೇಬಿನಿಂದ ಬಗೆಬಗೆದು ಇಡುವ ರೀತಿ ಅಸಹ್ಯವಾಗಿದೆ. ಹಾಗಾಗಿ ಯಾವ ಮೌಲ್ಯಗಳ ಸಂಪೂರ್ಣ ದರ್ಶನವೂ ಇಲ್ಲಿ ಕಾಣಿಸುವದಿಲ್ಲ. ಹಲವು ದೇಶ ಸುತ್ತಿ ಹಲವು ಕೋಶಗಳನ್ನು ಓದಿದರೆ ಬುದ್ಧಿ ವಿಶಾಲವಾಗುತ್ತದೆ ಎಂದು ಹಿರಿಯರು ಹೇಳುತ್ತಾರೆ. ಆದರೆ ಮಸ್ತಕ ಮುಚ್ಚಿ ಹಾರೆ ಹೊಡೆದ ಬೂಚು ಬಿದ್ದ ಮನಸ್ಸಿನಿಂದ ಎಷ್ಟು ನಾಡು ಕಂಡರೂ ಎಂಥ ಓದು ಓದಿದರೂ ಎಷ್ಟು ಬಾವಿ ನೀರು ಕುಡಿದರೂ ಎಲ್ಲ ಹೊಳೆಯಲ್ಲಿ ಹುಣಸೆ ತೊಳೆದಂತೆ.

ಪುರುಷ ಮಹಿಳೆಯ ಮೇಲೆ ತೋರುವ ದೌರ್ಜನ್ಯಕ್ಕೆ ಅವಳ ಹೀನ ಪ್ರಚೋದನೆ ಕಾರಣವೆಂದು ನ್ಯಾಯಾಧೀಶರಂತೆ ವಾದಿಸುವಿಕೆ, ಹಣೆಗೊಂದು ಕುಂಕುಮವೂ ಇಡದ ವಿಕರ್ಷಕ ಕಳೆಯೆಂದು ಸುಮಾರು ಐವತ್ತಕ್ಕಿಂತ ಹೆಚ್ಚು ಬಾರಿ ಬಡಬಡಿಸುತ್ತ ನಿಲ್ಲುವುದು ನೋಡಿದರೆ ಈ ಬರಹಕ್ಕೆ ಕವಲು ಎಂಬ ಹೆಸರಿಗಿಂತ 'ಬೋಳು ಹಣೆ' ಅಥವಾ 'ಸೂತಕ ಕಳೆ' ಎಂಬ ತಲೆ ಬರಹವೇ ಒಪ್ಪುತ್ತಿತ್ತು ಅನಿಸುತ್ತದೆ. ಇತ್ತೀಚೆಗೆ ಮಹಿಳೆಯರು ಹೆಚ್ಚು ಹೆಚ್ಚು ವಿದ್ಯಾವಂತರಾಗಿರುವದೇ ಒಂದು ವರ್ಗದ ನಿದ್ದೆಗೆಡಿಸಲು ಕಾರಣವಾಗಿದೆ. ಹೆಣ್ಣು ಇಂದು ಸಮಾಜದಲ್ಲಿ ಗಳಿಸಿಕೊಂಡಿರುವ ಸ್ಥಾನಮಾನಗಳು ಕೆಲವರ ಮತಿಗೆಡಿಸಿದಂತಿವೆ. ಇಲ್ಲಿಯ ಒಟ್ಟೂ ಬರವಣಿಗೆ ಸುಶಿಕ್ಷಿತರಾದ ಹಾಗೂ ಪುರುಷರ ಸರಿಸಮಾನವಾಗಿ ಯೋಚಿಸಲು ಬಲ್ಲ ಸ್ತ್ರೀಯರೆಲ್ಲರನ್ನೂ ಗಲ್ಲಿಗೇರಿಸಿಯೇ ಬಿಡುವ ಧಾವಂತಕ್ಕೆ ಬಿದ್ದಿದೆ. ಯಾವ ವೇಷ ಭೂಷಣದಲ್ಲಿದ್ದರೂ ನಿಜವಾದ ಹೆಣ್ಣಿನ ಅಂತಃಕರಣ ಬಲ್ಲ ಯಾವ ಗಂಡಸೂ ಇಂಥ ಬರಹವನ್ನು ಬರೆಯಲಾರ.

ಭಾರತೀಯ ಸಮಾಜದ ಮೌಲ್ಯಗಳ ಕುರಿತು ಇವರಿಗಿರುವ ಕಲ್ಪನೆಯೇ ಬೇರೆ. ಸದಾ ಉಳ್ಳವರ, ಆಳುವವರ ಅಮಾನವೀಯ ಸನಾತನ ಸಂಸ್ಕೃತಿಯ ಪರ ಢಮರು ಬಾರಿಸುವ ವಲಯಗಳು ಈ ಬಾರಿ ಮಹಿಳೆಯರ ವಿರುದ್ಧ ಕುಚೇಷ್ಟೆಗಿಳಿದಿದ್ದಾವೆ. ಅತ್ತೆಯಿಂದ ಸೊಸೆಗೆ ಮುಂಡೆಯೆಂದು ಹೇಳಿಸಿ ಅಭಿಮಾನ ಪಡುವ ಮನೋರೋಗಿಗಳು ಇಲ್ಲಿದ್ದಾರೆ. 'ಗೃಹಿಣಿ ಮಾಡುವ ರುಚಿ' ಎಂದು ಪ್ರತ್ಯೇಕಿಸುವ ತೆವಲು ಬೇರೆ. ಗಗನ ಸಖಿಯನ್ನು ಪರಿಚಾರಿಕೆ ಮಾಡಹೊರಟ ಈ ಅರಳುಮರಳಿನ ಬರಹನ್ನು ಓದುವುದೂ ಒಮ್ಮೊಮ್ಮೆ ಒಂದು ತಮಾಷೆಯೇ ಅನಿಸುತ್ತದೆ. ಮಹಿಳೆಯರನ್ನು ತುಚ್ಛವಾಗಿ ಕಾಣುವ ನಡೆಸಿಕೊಳ್ಳುವ ದುರುಳ ಮನಸ್ಸಿಗೆ, ಇಂತಹ ಕುಹಕ ಕುತಂತ್ರದ ಶೈಲಿಗೆ, ವಿಚಾರಗಳಿಗೆ ಧಿಕ್ಕಾರವಿರಲಿ. ದಯವಿಟ್ಟು ಯಾರೂ ಇಂಥ ಬರಡು ಬರಹವನ್ನು ಓದಿ ನನ್ನಂತೆ ನಿಮ್ಮ ಅಮೂಲ್ಯ ಸಮಯವನ್ನು ವ್ಯರ್ಥ ಮಾಡಿಕೊಳ್ಳಬೇಡಿ ಎಂದು ಸಹೃದಯ ಓದುಗರಲ್ಲಿ ವಿನಂತಿಸಿಕೊಳ್ಳುವೆ.

●

---

# ಜೀವನದೃಷ್ಟಿಯ ಕೊರತೆಯ 'ಕವಲು'

■ *ಡಾ. ಸಬಿತಾ ಬನ್ನಾಡಿ*

ಕಳೆದ ವರ್ಷ ಖಾಸಗಿ ಟಿ.ವಿ. ಚಾನಲ್‌ವೊಂದರಲ್ಲಿ 'ಮಹಿಳೆಯರು ಉದ್ಯೋಗಕ್ಕೆ ಹೋಗಬೇಕಾಗಿಲ್ಲ' ಎಂಬ ಹೇಳಿಕೆ ಇತ್ತ ಸ್ವಾಮಿಯೊಬ್ಬರೊಂದಿಗೆ ಚರ್ಚೆ ನಡೆಯಿತು. ಆ ಸಂದರ್ಭದಲ್ಲಿ ಅನೇಕರು ಕೇಳಿದ ಪ್ರಶ್ನೆಗೆ ಉತ್ತರಿಸುವುದು ಆ ಸ್ವಾಮಿಗೆ ಕಷ್ಟವಾಯಿತು. ಆದರೂ ತನ್ನ ಮೊಂಡುವಾದವನ್ನು ಆತ ಬಿಡಲಿಲ್ಲ. ಲೋಕಸಭೆಯಲ್ಲಿ ಮಹಿಳಾ ಮೀಸಲಾತಿಯ ಪ್ರಶ್ನೆ ಬಂದಾಗ ಮೈಮೇಲೆ ಸುಡುನೀರು ಬಿದ್ದವರಂತೆ ಥಕಥೈ ಕುಣಿಯುವ ಸಂಸದರನ್ನು ನಾವು ನೋಡಿದ್ದೇವೆ. ಈ ವರ್ಷ ಭೈರಪ್ಪನವರ ಕಾದಂಬರಿ 'ಕವಲು' ಇಂತಹ ಮನಸ್ಥಿತಿಯ ಮುಂದುವರಿದ ರೂಪವಾಗಿ ಪ್ರಕಟವಾಗಿದೆ. ಶೇಕಡಾವಾರು ಲೆಕ್ಕಾಚಾರದಲ್ಲಿ ಅತ್ಯಂತ ಕಡಿಮೆ ಸಂಖ್ಯೆಯಲ್ಲಿ ಸಾರ್ವಜನಿಕವಲಯದಲ್ಲಿ ಮುಂಚೂಣಿ ಸ್ಥಾನದಲ್ಲಿ ಮಹಿಳೆಯ ಪ್ರವೇಶವಾಗಿದೆ. ಇಷ್ಟು ಕಡಿಮೆ ಸಂಖ್ಯೆಯಲ್ಲಾದರೂ ಮಹಿಳೆಯು ಪ್ರವೇಶಿಸಿ, ಯಶಸ್ಸು ಕಾಣುತ್ತಿರುವ ಕಾಲಘಟ್ಟ ಇದು. ಇಷ್ಟಕ್ಕೇ ಈ ರೀತಿಯ ಪ್ರತಿಕ್ರಿಯೆ ಬರುತ್ತಿರುವುದು ಅನಿರೀಕ್ಷಿತವೇನಲ್ಲ. ಬದಲಿಗೆ, ಈಗಲೇ ಎಚ್ಚೆತ್ತುಕೊಳ್ಳದಿದ್ದಲ್ಲಿ ಮುಂದೇನೋ ಎಂಬ ಅನಾವಶ್ಯಕ ಗಾಬರಿಗೆ ಬಿದ್ದುದರ ಫಲ ಇದು.

ಜಾಗತಿಕ ಮಟ್ಟದಲ್ಲಿ ಮುಕ್ತ ಮಾರುಕಟ್ಟೆಯು ಸೃಷ್ಟಿ ಮಾಡಿರುವ ಕೆಲವು ಅವಕಾಶಗಳು ಒಂದೆಡೆ ಮತ್ತು ಅದು ಸೃಷ್ಟಿಮಾಡಿರುವ ಅವಕಾಶಕ್ಕಿಂತಲೂ ಹೆಚ್ಚಾಗಿ ಅದು ಹುಟ್ಟುಹಾಕುತ್ತಿರುವ ವಿಕೃತಿಗಳು ಇನ್ನೊಂದೆಡೆ, ಈ ಸವಾಲುಗಳ ಕಾಲದಲ್ಲಿ ಹೆಂಗಸರು ತಮ್ಮ ಅಸ್ತಿತ್ವವನ್ನು ಸಾಬೀತು ಪಡಿಸುವುದೇ ದುಸ್ತರವಾಗಿದೆ. ಹೆಂಗಸಿನ ಕುರಿತಾದ ಪಾರಂಪರಿಕ ಅಪಕಲ್ಪನೆಗಳನ್ನು ನಾಶಮಾಡಬೇಕಾದ ಹೊತ್ತಿನಲ್ಲಿ, ಪರೋಕ್ಷವಾಗಿ ಆ ಅಪಕಲ್ಪನೆಗಳನ್ನು ಹೆಣ್ಣೇ ತಾನಾಗಿ ಒಪ್ಪಿಕೊಳ್ಳುವಂತೆ ಮಾಡುತ್ತಿರುವ ಕಾಲ ಇದು. ಉದಾ: ಹೆಣ್ಣು ತನ್ನ ಬೌದ್ಧಿಕ ಶಕ್ತಿಯ ಕಡೆ ಗಮನ ಹರಿಸುವುದಕ್ಕಿಂತಲೂ ತನ್ನ ದೇಹ ಸೌಂದರ್ಯದ ಕಡೆಗೇ ಗಮನ ಹರಿಸುವಂತೆ, ಅದೇ ತನ್ನ ಗೆಲುವಿನ ಸಾಧನ ಎಂದು ನಂಬಿಕೊಳ್ಳುವಂತೆ ಮಾಡಲಾಗುತ್ತಿದೆ. ಹೆಂಗಸರು ತುಂಡುಡುಗೆ ತೊಡುವುದನ್ನು ಪ್ರೋತ್ಸಾಹಿಸಲಾಗುತ್ತಿದೆ–ಮುಖ್ಯವಾಗಿ ಮಾಧ್ಯಮಗಳಲ್ಲಿ ಈ ರೀತಿ ತುಂಡುಡುಗೆ ತೊಟ್ಟು ಯಶಸ್ವಿ ಎನಿಸಿಕೊಂಡ ಮಹಿಳೆಗೆ ಹೆಸರು, ಗೌರವ, ಹಣ ಸಂದಾಯವಾಗುತ್ತಿದ್ದು ಇದು ಚಿಕ್ಕವರಿಗೆ 'ಮಾದರಿ' ಎನಿಸಿಕೊಳ್ಳುತ್ತಿದೆ.

ಹೀಗೆ ಸಮುದಾಯದಲ್ಲಿ ಮಾಧ್ಯಮಗಳ ಮೂಲಕ ಇಂತಹ ಬದಲಾವಣೆಗಳನ್ನು ತರಲು ನಿರಂತರವಾಗಿ ಶ್ರಮಿಸುತ್ತಿರುವ 'ಮಾರುಕಟ್ಟೆ' ಸಂಸ್ಕೃತಿ ಹೆಣ್ಣನ್ನೂ ಮಾರುಕಟ್ಟೆಯ ಸರಕನ್ನಾಗಿಸುವಲ್ಲಿ ಸದಾ ನಿರತವಾಗಿದೆ. ಆದರೂ, ವಿದ್ಯೆ ಮತ್ತು ಆರ್ಥಿಕ ಸ್ವಾವಲಂಬಿತನಕ್ಕೆ ಸಿಕ್ಕಿರುವ ಕನಿಷ್ಠ ಅವಕಾಶವನ್ನೇ ಬಳಸಿಕೊಂಡು ಮಹಿಳೆಯರು ಸ್ವಾಯತ್ತತೆಯನ್ನು ಪಡೆಯತೊಡಗಿದ್ದಾರೆ. ಈ ಚಿಕ್ಕ ಗುಂಪಿನ ಯಶಸ್ಸೇ

ಇಂದು ಭೈರಪ್ಪನಂಥವರ ಕಣ್ಣನ್ನು ಕೆಂಪಗಾಗಿಸಿರುವ ಸಂಗತಿಯಾಗಿದೆ. ಅದರಲ್ಲೂ 'ಸ್ತ್ರೀವಾದ'ದ ಪ್ರಖರ ಚಿಂತನೆಯನ್ನು ಮಣ್ಣುಗೂಡಿಸಲು ಸಾಧ್ಯವಾಗುತ್ತಿಲ್ಲ ಎಂಬ ಅಸಹಾಯಕತೆ ಅವರನ್ನು ಇಂತಹ ಕಾದಂಬರಿ ಬರೆಯುವಂತೆ ಮಾಡಿದೆ. ತಾನು ಇದನ್ನೆಲ್ಲಾ ತಿಳಿದುಕೊಂಡೇ ಬರೆಯುತ್ತಿರುವವನು ಎಂಬುದನ್ನು ತೋರ್ಪಡಿಸಿಕೊಳ್ಳುವುದಕ್ಕಾಗಿ ಅವರು ಸಿಮನ್ ದಬೋವಾಳ ಕೃತಿಯನ್ನು ಕಾದಂಬರಿಯೊಳಗಡೆ ಉಲ್ಲೇಖಿಸುತ್ತಾರೆ. (ಕೇವಲ ಉಲ್ಲೇಖಿಸುತ್ತಾರೆ, ಅರ್ಥ ಮಾಡಿಕೊಂಡ ಯಾವ ಸೂಚನೆಯೂ ಕಾಣಿಸುವುದಿಲ್ಲ). ಆದರೆ ಹೆಂಗಸರ ಕುರಿತಾದ ತಮ್ಮ ಒಟ್ಟು ಗ್ರಹಿಕೆಯಲ್ಲೇ ಭೈರಪ್ಪ ವಿಫಲರಾಗಿದ್ದಾರೆ ಎಂಬುದಕ್ಕೆ ಅವರ ಕಾದಂಬರಿಯೊಳಗೇ ಅನೇಕ ನಿದರ್ಶನಗಳು ಸಿಗುತ್ತವೆ.

ಈ ಕಾದಂಬರಿಯಲ್ಲಿ ಭೈರಪ್ಪ ಸ್ತ್ರೀ ವಿರೋಧಿ ನಿಲುವು ವ್ಯಕ್ತಪಡಿಸುವ ಭರದಲ್ಲಿ, ದುರ್ಬಲ ಗಂಡಸರ ಚಿತ್ರಣಮಾಡಿ ಪುರುಷರಿಗೂ ಅನ್ಯಾಯ ವೆಸಗಿದ್ದಾರೆ. ಇಡೀ ಕಾದಂಬರಿಯು ಒಂದು ಸರಳ ಹಂದರದ ಮೇಲೆ ನಿರ್ಮಾಣಗೊಂಡಿದ್ದು ಈ ಹಂದರದ ಮೂಲ ಆಧಾರವೇ ಪೂರ್ವಾಗ್ರಹ ಪೀಡಿತವಾದುದು. ಅದೇನೆಂದರೆ, ವಿದ್ಯಾವಂತ ಮತ್ತು ಉದ್ಯೋಗಸ್ಥ ಹೆಂಗಸರ ಸಾಮ್ರಾಜ್ಯದಲ್ಲಿ ಗಂಡಸು ಧ್ವನಿಇಲ್ಲದ ಮತ್ತು ಮೋಸಕ್ಕೆ ಬಳಗಾದ ಅಸಹಾಯಕನಾಗಿದ್ದಾನೆ. ತನ್ನ ಸಹಜ ಗುಣವಾದ 'ಪೌರುಷ'ಕ್ಕೆ ಧಕ್ಕೆ ತಂದುಕೊಂಡಿದ್ದಾನೆ ಎಂಬುದು. ಇದೇ ಭೈರಪ್ಪನವರ ಮೂಲನೆಲೆ. ಹೀಗಾಗಿ, ಒಂದರ್ಥದಲ್ಲಿ ಭೈರಪ್ಪ ಕೇವಲ ಸ್ತ್ರೀಯರ ವಿರೋಧಿ ಅಲ್ಲ, ಬದಲಿಗೆ ವಿದ್ಯಾವಂತ, ಉದ್ಯೋಗಸ್ಥ ಸ್ತ್ರೀಯರ ವಿರೋಧಿ! ಆದರೆ, ಅಲ್ಲೂ ಒಂದು ಅಪವಾದವೆಂಬಂತೆ ವೈಜಯಂತಿಯ ಪಾತ್ರವನ್ನು ಚಿತ್ರಿಸಿದ್ದಾರೆ. ಆದರೆ, ಹಾಗವರು ಚಿತ್ರಿಸುವುದು – ವಿದ್ಯಾವಂತ, ಉದ್ಯೋಗಸ್ಥ ಮಹಿಳೆಯರು ಹ್ಯಾಗಿರಬೇಕು ಎಂಬುದನ್ನು ಸೂಚಿಸಲು, ಒಂದು 'ಮಾದರಿ'ಯನ್ನು ನಿರ್ಮಿಸಲು ಮಾತ್ರ.

ಭೈರಪ್ಪನವರ ಈ 'ಮಾದರಿ ಸ್ತ್ರೀ'ಯ ಮುಖ್ಯ ಗುಣವೇನೆಂದರೆ ಆಕೆ ಕುಟುಂಬ, ಪತಿಗೆ ನೀಡುವ ಗೌರವ ಇತ್ಯಾದಿ ವಿಚಾರಗಳಲ್ಲಿ ಎಲ್ಲೆ ಮೀರಬಾರದು ಎಂಬುದು. ಅವರೇ ಕಾದಂಬರಿಯುದ್ದಕ್ಕೂ ಸೂಚಿಸುವಂತೆ ಈ 'ಎಲ್ಲೆ'ಗಳು ಯಾವುದೆಂದರೆ ಸ್ತ್ರೀ ಲೈಂಗಿಕ ಸ್ವಾತಂತ್ರ್ಯ ಪ್ರತಿಪಾದಕಳಾಗಬಾರದು, ಪತಿಗೆ ಏಕವಚನ ಬಳಸಬಾರದು, ಆಕೆ ಪರಂಪರಾಗತ ಭಾರತೀಯ ವೇಷಭೂಷಣಗಳನ್ನೇ ಧರಿಸಬೇಕು. ಎಂಥಾ ಆಧುನಿಕಳಾದರೂ ತನ್ನ ಹೆಣ್ಣು ಮಕ್ಕಳಿಗೆ ಹೂ ಕಟ್ಟುವುದು, ಹಾಡು–ಹಸೆ, ಕಸೂತಿ ಹಾಕುವುದು, ಅಡುಗೆ ಮಾಡುವುದು ಇತ್ಯಾದಿ ತರಬೇತಿಗಳನ್ನು ನೀಡಿರಬೇಕು. ಎಲ್ಲಕ್ಕಿಂತ ಮುಖ್ಯವಾಗಿ ಗಮನಿಸ ಬೇಕಾದ ವಿಚಾರವೆಂದರೆ ಆಕೆ 'ಶಯನೇಶು ವೇಶ್ಯಾ' ಆಗಿರಬೇಕು ಎಂಬುದನ್ನು ಮತ್ತೆ ಮತ್ತೆ ಸೂಚಿಸುವುದು.

"ಸಣ್ಣಗೆ ಕತ್ತರಿಸಿದ ಕ್ರಾಪ್ ಕಟ್ ಕೂದಲು, ಬರಿ ಹಣೆ, ಬರಿ ಕಿವಿ, ಎಡಗೈಗೆ ಗಡಿಯಾರ, ಬಳೆ ಇಲ್ಲ. ಸಲ್ವಾರ್ ಕಮೀಜ್, ಅಪೂರ್ವಕ್ಕೆ ಸೀರೆ. ಮುಸಲ್ಮಾನರವಳು ಎನ್ನಬಹುದು. ವೈಧವ್ಯ ಅಥವಾ ಸೂತಕದ ಕಳೆ". ಇದು ಹೆಚ್ಚೂ ಕಡಿಮೆ ಈ ಕಾದಂಬರಿಯಲ್ಲಿ ಬರುವ ಎಲ್ಲ ಆಧುನಿಕ ಸ್ತ್ರೀಯರ ಕುರಿತು ಲೇಖಕರು ಮಾಡುವ ವರ್ಣನೆ. (ದಟ್ಟವಾಗಿ ಬೆಳೆದ ಸೊಂಪಾದ ತಲೆಗೂದಲು, ಹುಬ್ಬುಗಳ ನಡುವೆ ಕುಂಕುಮದ ದೊಡ್ಡ ತಿಲಕ. ಕತ್ತಿನಲ್ಲಿ ಅರ್ಧ ಇಂಚಿನಷ್ಟು ದಪ್ಪಗಿರುವ ಗಿಡ್ಡಸರ. ಬಲ ಕೈಯಲ್ಲಿ ಒಂದಿಂಚು ದಪ್ಪದ ಚಿನ್ನದ ಬ್ರಾಸ್‌ಲೆಟ್, ಎಡಗೈಯಲ್ಲಿ ಮಿರಮಿರನೆ ಮಿಂಚುವ ದಪ್ಪನೆಯ ಚಿನ್ನದ ಬಣ್ಣದ ವಾಚ್, ಎರಡೂ ಕೈಯ ಬೆರಳುಗಳಲ್ಲಿ ನಾನಾ ಹರಳುಗಳ ದಪ್ಪನೆಯ ಉಂಗುರಗಳನ್ನು ಧರಿಸಿರುವ, ಮುಖದಲ್ಲಿ ರೌಡಿ ಕಳೆ ಹೊತ್ತ ಪುರುಷನ ವರ್ಣನೆಗೆ ವಿರುದ್ಧವಾಗಿ ಭೈರಪ್ಪ ಹೆಂಗಸರ ಈ ವರ್ಣನೆ ಮಾಡಿರಬಹುದೇ?–(ನನಗಂತೂ ಅವರ ಆ ವರ್ಣನೆ ಓದುತ್ತಿದ್ದಂತೆ ಥಟ್ಟನೆ ಇಂಥದೊಂದು ವರ್ಣನೆ ಮನಸ್ಸಿನಲ್ಲಿ ಹಾದು ಹೋಯಿತು!) ಇವರು ಹೀಗೆ ವರ್ಣಿಸುವುದರ ಮುಖ್ಯ ಉದ್ದೇಶವೆಂದರೆ, ಇಂತಹ ಅಲಂಕಾರ ಹೊತ್ತ ಹೆಂಡತಿ ಗಂಡನಲ್ಲಿ ವಿಕರ್ಷತೆಯನ್ನು ಉಂಟು ಮಾಡುತ್ತಾಳೆ ಎಂಬುದು. ಅವರೇ ಹೇಳುವಂತೆ "ಮುಖಕ್ಕೆ ಹೊಂದುವಂಥ ಕುಂಕುಮ, ಬಾಚಿ ಹೆಣೆದ ಜಡೆ, ಮುಡಿಯಲ್ಲಿ ಕಂಗೊಳಿಸುವ ಮಲ್ಲಿಗೆ ಹೂವು, ಕೊರಳನ್ನು ಬೆಳಗುವ ಮಾಂಗಲ್ಯದ ಸರ, ನೋಡಿದರೆ ಇವಳು ತನ್ನ ಗಂಡನ ಆಯುಷ್ಯದ ವರ್ಧಕಳು, ಆ ವರ್ಧನೆಗೆ ದೇವರನ್ನು ಪೂಜಿಸುವವಳು ಎನ್ನುವ ಅಭಯ ಹುಟ್ಟಿಸುವ ಪ್ರಸಾಧನ, ಪ್ರಸನ್ನತೆಗಳು. ಇಂಥ ಕ್ಷೇಮ ಭಾವದಲ್ಲಿ ತಾನೇ ಪುರುಷನ ಪುರುಷತ್ವ ವರ್ಧಿಸಿ ವಿಜೃಂಭಿಸುವುದು ಸೂತಕದಲ್ಲಿರುವ ಹೆಂಡತಿಯ ಹತ್ತಿರ ಯಾವ ಉತ್ತೇಜನವಾಗುತ್ತೆ?" (ಪು. 47, 7ನೇ ಮುದ್ರಣ).

ಆದರೆ, ಗಮನಿಸಬೇಕಾದ ಅಂಶವೊಂದಿದೆ. ಈ ಎಲ್ಲಾ ಅಲಂಕಾರ ಗಳನ್ನು ಅವರು ನಿರೀಕ್ಷಿಸುವುದು ಹೆಂಡತಿಯಿಂದ ಮಾತ್ರ. ಈ ಯಾವ ಅಲಂಕಾರವಿಲ್ಲದೆಯೂ ಈ ಕಾದಂಬರಿಯುದ್ದಕ್ಕೂ ಗಂಡಸರು ಹೆಂಗಸರ ತೆಕ್ಕೆಗೆ ಬಿದ್ದಿದ್ದಾರೆ! ಆಗ ಅವರಿಗೆ ಹೇಗೆ ಪ್ರಚೋದನೆಯಾಯಿತೋ ಗೊತ್ತಿಲ್ಲ. (ನಿಜ ಹೇಳಬೇಕೆಂದರೆ ಈ ಕಾದಂಬರಿಗೆ ಕವಲು ಎಂಬ ಹೆಸರಿಗಿಂತ 'ಕಾಮಾಯಣ' ಎಂಬ ಹೆಸರೇ ಅನ್ವರ್ಥಕ) ಮಂಗಳೆ–ಪ್ರಭಾಕರ; ಮಂಗಳೆ–ಜಯಕುಮಾರ್; ಡಾ. ಇಳಾ–ದೊರೆಸ್ವಾಮಿ; ನಚಿಕೇತನ ಮೊದಲ ಎರಡು ಸಂಬಂಧಗಳು ಹೀಗೆ ಇಲ್ಲೆಲ್ಲಾ ಈ ರೂಪು ಅಡ್ಡಿ ಮಾಡುವುದಿಲ್ಲ. ಅಂತೂ ಇಂತಹ ಬಾಹ್ಯ ವಿವರಗಳ ಮೂಲಕ ಭೈರಪ್ಪ ಏನನ್ನು ಹೇಳ ಹೊರಡುತ್ತಿದ್ದಾರೆ? ದಾಂಪತ್ಯದ ಯಶಸ್ಸು ಅಥವಾ ಕುಟುಂಬದ ಸೌಹಾರ್ದಕ್ಕಾಗಿ ಭೈರಪ್ಪನವರ ಮನಸ್ಸು ತುಡಿಯುತ್ತಿದೆ ಎಂದು ನಂಬಲು ಅಥವಾ ಕೌಟುಂಬಿಕ ಮೌಲ್ಯಗಳು ಕವಲುಹಾದಿ ಹಿಡಿಯುತ್ತಿದ್ದು ಅದನ್ನು ತಡೆಯಬೇಕು ಎಂಬ ಪ್ರಾಮಾಣಿಕ ಕಳಕಳಿ ಅವರಿಗಿದೆ ಎಂದು ಒಪ್ಪಿಕೊಳ್ಳಲು ಈ ಕಾದಂಬರಿಯಲ್ಲಿ ಸಾಕ್ಷ್ಯಾಧಾರಗಳು ಸಿಗುವುದಿಲ್ಲ. ಬದಲಿಗೆ, ದಾಂಪತ್ಯದ ಯಶಸ್ಸಿಗೆ ಅವರ ಸುಲಭೋಪಾಯವೆಂದರೆ 'ಸ್ವಾಭಿಮಾನ ಹೀನ' ಹೆಂಡತಿ, 'ಸ್ವ'ದ ಅರಿವು ಇಲ್ಲದ ಸ್ತ್ರೀಯೇ ಆಗಿದ್ದಾಳೆ. ಹೀಗಾಗಿ ಅವರಿಗೆ ಕಾಣಿಸುತ್ತಿರುವ 'ಕವಲು' ದಾಂಪತ್ಯ ಅಥವಾ ಕುಟುಂಬದ್ದಲ್ಲ. ಹೆಣ್ಣಿನ 'ಚಹರೆ'ಯದ್ದು. ಇದನ್ನು ನೇರವಾಗಿ ಹೇಳುವುದನ್ನು ಬಿಟ್ಟು ಮೌಲ್ಯಗಳ ಕುಸಿತ, ಗಂಡಿನ ಶೋಷಣೆ ಎಂಬೆಲ್ಲಾ ಮುಸುಕುಗಳ ಮರೆಯಲ್ಲಿ ಮೋಸದಾಟ ಆಡಲು ಪ್ರಯತ್ನಿಸಿದ್ದಾರೆ. ಆಧುನಿಕ ಬದುಕಿನ ಸಂಘರ್ಷಗಳನ್ನು ಹೇಳುವುದಾಗಲೀ, ಕಾನೂನುಗಳ ದುರುಪಯೋಗ ಆಗುವುದನ್ನಾಗಲೀ ಪ್ರಾಮಾಣಿಕವಾಗಿ ಹೇಳ ಹೊರಟಿದ್ದರೆ ಭೈರಪ್ಪನವರನ್ನು ವಿರೋಧಿಸುವವರಿಗೂ ಅವರ ಮೇಲೆ ಗೌರವ ಉಳಿಯುತ್ತಿತ್ತು. ಅಥವಾ 'ಕುಟುಂಬ'ದ ಬಗೆಗಿನ ಅಸೀಮ ನಂಬಿಕೆಯು ಛಿದ್ರಗೊಳ್ಳುವ ಆತಂಕಕ್ಕೆ ಒಳಗಾಗಿ ಆ ತೀವ್ರತೆಯ ಆಘಾತವನ್ನು ಅಭಿವ್ಯಕ್ತಿಸಿದ್ದರೆ ಆ ಬಗೆಗೆ ನಂಬಿಕೆ ಇಲ್ಲದವರಿಗೂ ಅವರ ನೋವು ಅರ್ಥವಾಗುತ್ತಿತ್ತು. ಆದರೆ ಇದ್ಯಾವುದೂ ಕವಲಿನ ಕಾಳಜಿಗಳಲ್ಲ ಎಂಬುದು ಸ್ವಲ್ಪ 'ಅರಿವು' ಇರುವವರಿಗೂ ಅರ್ಥವಾಗುತ್ತದೆ.

ಕಾದಂಬರಿಯುದ್ದಕ್ಕೂ ಗಂಡು–ಹೆಣ್ಣಿನ ಸಂಬಂಧದ ಸೂಕ್ಷ್ಮಗಳನ್ನು ಅನಾವರಣ ಮಾಡುವುದಕ್ಕಿಂತಲೂ ಹೆಚ್ಚಾಗಿ ಹೆಣ್ಣು ಗಂಡಿಗೆ ಅಡಿಯಾಳಾಗಿರಬೇಕು ಎಂಬೆಡೆಗೇ ಅವರ ಗಮನ ಹೆಚ್ಚಾಗಿದೆ. (ಹೆಣ್ಣು ಗಂಡಿಗೆ ಅಡಿಯಾಳಾಗಿರಬೇಕೇ? ಎಂದು ಕಾದಂಬರಿಯಲ್ಲಿ ಪ್ರಶ್ನಿಸುವ ಹೆಣ್ಣುಗಳೆಲ್ಲರೂ ಮುಕ್ತ ಕಾಮಿಗಳಾಗಿ, ಖಳನಾಯಕಿಯರಾಗಿ ಚಿತ್ರಿತರಾಗಿದ್ದಾರೆ). 'ಸಮಾನತೆ'ಯಲ್ಲಿ ಸುಮಧುರ ದಾಂಪತ್ಯ ಅಸಾಧ್ಯ

ಎಂಬ ನಿಲುವಿಗೆ ಅವರು ಬಂದು ಬಿಟ್ಟಿದ್ದಾರೆ. 'ಕಲಿತ ಗಂಡು ಹೆಂಗಸಾಗುವುದು' ಎಂದರೆ ಅವರ ಪ್ರಕಾರ, ಆತ ಪೌರುಷ ಕಳೆದು ಕೊಳ್ಳುವುದು. ಪೌರುಷ ಕಳೆದುಕೊಳ್ಳುವುದು ಅಂದರೆ, ಬೇರೆಯವರ ಮೇಲೆ–ಮುಖ್ಯವಾಗಿ ಹೆಂಗಸರ ಮೇಲೆ–ದಬ್ಬಾಳಿಕೆ ನಡೆಸದೇ ಇರುವುದು ಅಥವಾ ದಬ್ಬಾಳಿಕೆ ನಡೆಸಲು ಸಾಧ್ಯವಾಗದೇ ಇರುವುದು. 'ದಬ್ಬಾಳಿಕೆ' ಇಲ್ಲದೇ ಹೆಣ್ಣನ್ನು ಗೆಲ್ಲುವುದು ಗಂಡಿಗೆ ಸಾಧ್ಯವೇ ಇಲ್ಲವೇ? ಇಂದು ಗಂಡಸರಾಗಲೀ, ಹೆಂಗಸರಾಗಲೀ ಮೊದಲು ಹೊರ ಬರಬೇಕಾಗಿರುವುದು ಈ ಮನೋದೌರ್ಬಲ್ಯದಿಂದಲೇ ಹೊರತು ಗಂಡಿನ ದಬ್ಬಾಳಿಕೆಗೆ ಪರ್ಯಾಯ ಹೆಣ್ಣಿನ ದಬ್ಬಾಳಿಕೆಯಲ್ಲ ಅಥವಾ ಹೆಣ್ಣಿನ ಮೇಲಿನ ಗಂಡಿನ ದಬ್ಬಾಳಿಕೆಯನ್ನು ಸಮರ್ಥಿಸುವುದು, ವೈಭವೀಕರಿಸುವುದೂ ಅಲ್ಲ.

ಎಲ್ಲಕ್ಕಿಂತ ಹೆಚ್ಚಾಗಿ ಕಾದಂಬರಿಯುದ್ದಕ್ಕೂ ಗಂಡಿಗೆ 'ಹತ್ತಿಕ್ಕಿಕೊಳ್ಳಲಾರದ ಕಾಮವಾಂಛೆ'ಯಿಂದ ಆತ ಹೆಣ್ಣಿನ ಮೋಸಜಾಲಕ್ಕೆ ಸಿಲುಕುವ 'ಮೂರ್ಖ'ನಾಗುತ್ತಾನೆ ಎಂಬಂತೆ ಗಂಡಸನ್ನು ಚಿತ್ರಿಸಲಾಗಿದೆ. ಈ ಕಾದಂಬರಿಯಲ್ಲಿ ಬರುವ ಪುರುಷ ಪಾತ್ರಗಳ ಕುರಿತು 'ಅಯ್ಯೋ ಪಾಪ' ಅನಿಸುತ್ತದೆ. ಗಂಡಿನ ಕಾಮಪಿಪಾಸೆಗೆ ಮೂರುವರ್ಷದ ಬಾಲೆಯಿಂದ ಹಿಡಿದು 80 ವರ್ಷದ ಮುದುಕಿಯವರೆಗೂ ಬಲಿ ಯಾಗುತ್ತಿರುವ ಈ 'ಪವಿತ್ರ' ದೇಶದಲ್ಲಿ, ದಿನ ಬೆಳಗಾದರೆ ನಂಬಿಸಿ ಮೋಸ ಮಾಡಿದವನ ಮನೆಮುಂದೆ ಧರಣಿ ನಡೆಸಬೇಕಾಗಿರುವ ಈ 'ಪುಣ್ಯಭೂಮಿ'ಯಲ್ಲಿ ಭೈರಪ್ಪನವರ ಕಣ್ಣಿಗೆ ಬಿದ್ದಿರುವುದು ಕಾಮದ ಮೂಲಕ ಬುಟ್ಟಿಗೆ ಬೀಳಿಸಿಕೊಳ್ಳುವ ಹೆಂಗಸರು ಮಾತ್ರ. ಅದೂ ಯಾಕೆಂದರೆ, ಗಂಡಿಗೆ ಕಾಮ ಸಹಜ ಪ್ರವೃತ್ತಿಯಾದ್ದರಿಂದ!

ಒಂದೆಡೆ ಹೆಣ್ಣಿನಿಂದ ತೊಂದರೆಗೊಳಗಾಗುವ ಗಂಡಸರಿದ್ದರೆ, ಇನ್ನೊಂದೆಡೆ ಹೆಣ್ಣಿಗೆ ಬುದ್ಧಿ ಕಲಿಸುವ ಗಂಡಸರೂ ಈ ಕಾದಂಬರಿ ಯಲ್ಲಿದ್ದಾರೆ. ಅವರೆಡೆಗೆ ಒಮ್ಮೆ ಗಮನ ಹರಿಸಿದರೆ ಭೈರಪ್ಪನವರ ಗೊಂದಲಗಳು ಸ್ಪಷ್ಟವಾಗುತ್ತವೆ. ಹೆಣ್ಣಿನಿಂದ ತೊಂದರೆಗೆ ಒಳಪಡುವ ಗಂಡಸರೂ ಕಾಮ ಬಾಧಿತರೇ. ಹಾಗೆಯೇ ಹೆಂಗಸಿಗೆ ಬುದ್ಧಿ ಕಲಿಸುವವರೂ ಕಾಮಬಾಧಿತರೇ! ಡಾ. ಇಳಾಳ ಗಂಡ ಮಾತ್ರ ಕಾಮ ಬಾಧಿತನಲ್ಲದಿದ್ದರೂ ಹೆಂಡತಿ ಪೀಡಿತ ಮತ್ತು ಹೆಂಡತಿ ಪೀಡಕ (ಅಂದರೆ ಹೆಂಡತಿಯನ್ನು ಪೀಡನೆಗೆ ಒಳಪಡಿಸಿ ಬುದ್ಧಿ ಕಲಿಸುವ ಶೂರ. ಅದೂ ಅವಳ ಕಾಮಭಂಗಿಗಳ ಫೋಟೋ ತೆಗೆಸಿ ಹೆದರಿಸುವ ಪ್ರಚಂಡ) ಭೈರಪ್ಪನವರ ಪ್ರಕಾರ ಹೀಗೆ ಗಂಡಿನ ದೌರ್ಬಲ್ಯವನ್ನು ಬಳಸಿಕೊಂಡು ಲಾಭ ಮಾಡಿಕೊಳ್ಳುವುದು ವಿದ್ಯಾವಂತ, ಉದ್ಯೋಗಸ್ಥ ಮಹಿಳೆಯರು ಮಾತ್ರ. ಅನಕ್ಷರಸ್ಥ, ಬಡ ಹೆಂಗಸರ ಕುರಿತು ಅವರು ಯೋಚಿಸುವುದಕ್ಕೂ ಹೋಗುವುದಿಲ್ಲ. ಯಾಕೆಂದರೆ, ಬಡ ಗಂಡಸರ ಬವಣೆ ಅವರಿಗೆ ಮುಖ್ಯವಲ್ಲ. ಆದರೆ, ತಮಾಷೆಯೆಂದರೆ, ಓದಿದ, ಉದ್ಯೋಗಸ್ಥ ಮಹಿಳೆಯರು ಹೀಗೆ ವರ್ತಿಸುವುದಕ್ಕೆ ಇರುವ ಕಾರಣ ಅವರ ಪ್ರಕಾರ ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವ. ಹೋಗಲಿ, ಈ ಪಾಶ್ಚಾತ್ಯ ಸಂಸ್ಕೃತಿಯಿಂದ ಕೆಟ್ಟುಹೋದ ಈ ಹೆಂಗಸರ ಬಲೆಗೆ ಭೈರಪ್ಪನವರ ಅನುಕಂಪಕ್ಕೆ ಒಳಗಾಗಿರುವ ಪಾಪದ, ವಿದ್ಯಾವಂತ, ಉನ್ನತ ಹುದ್ದೆಯ ಗಂಡಸರು ಬೀಳಬಾರದು ಎಂಬ ವಿವೇಕವಾದರೂ ಯಾಕಿಲ್ಲ?

ಈ ಪ್ರಶ್ನೆಗೂ ಅವರ ಬಳಿ ಉತ್ತರವಿದೆ. ಅದೆಂದರೆ, ಸ್ವಚ್ಛಂದ ಮುಕ್ತ ಕಾಮ ಗಂಡಿಗೆ 'ದೋಷ'ವಲ್ಲ. ಅದು ಕೆಲವೊಮ್ಮೆ ಅವನಿಗೆ ಅನಿವಾರ್ಯ ಎಂಬುದನ್ನು ಓದುಗರು ಒಪ್ಪಿಕೊಳ್ಳುವಂತೆ ಮಾಡಬೇಕು ಎಂಬ ಅಜೆಂಡಾವೂ ಇಲ್ಲಿದೆ. (ಒಂದು ಕಾಲಕ್ಕೆ ಗಂಡಸರಿಗೆ ಇದು 'ಶೌರ್ಯ ಪ್ರಶಸ್ತಿಗಳ ಪದಕ'ಗಳಾಗಿತ್ತಲ್ಲವೇ?) ಆದ್ದರಿಂದಲೇ ಭೈರಪ್ಪನವರ ವಾದ ಯಾವ ಪಾತಾಳಕ್ಕೆ ಇಳಿಯುತ್ತದೆಂದರೆ, "ವೇಶ್ಯಾವಾಟಿಕೆ ಯಾರೂ ಮಾಡದ ಅಪರಾಧವಲ್ಲ. ಅದೇನು ಕೊಲೆ, ಸುಲಿಗೆ, ದರೋಡೆಯಂತಹ ಗುರುತರ ಅಪರಾಧವಲ್ಲ. ಅದೊಂದು ಜುಜುಬಿ ವಿಷಯ" ಎಂಬ ಸಮರ್ಥನೆಯ ತನಕ. ನಮ್ಮ ಬಾಲವಿಧವೆಯರಿಗೆ 'ಸಂಯಮ'ವನ್ನು ಬೋಧಿಸಿದ ಈ ದೇಶದಲ್ಲಿ ಮದುವೆಯಾದ, ಮದುವೆಗೆ ಅವಕಾಶ ಇರುವ ಗಂಡಸರಿಗೆ ಕನಿಷ್ಠ 'ತಾತ್ಕಾಲಿಕ ಸಂಯಮ'ವನ್ನಾದರೂ ಬೋಧಿಸಲು ಭೈರಪ್ಪನವರಿಗೆ ಸಾಧ್ಯವಾಗುವುದಿಲ್ಲ.

ಇದೆಲ್ಲಾ ಇರಲಿ, ಕಥಾ ನಾಯಕನಿಗೆ ಅವನ ಹೆಂಡತಿಯಿಂದ ಅನ್ಯಾಯವಾಗಿದೆ ಸರಿ. ಆದರೆ, ಅವನ ಹೆಂಡತಿಯೊಂದಿಗೆ ಚಕ್ಕಂದವಾಡಿದ ಪ್ರಭಾಕರನ ಬಗ್ಗೆ ಹಾಗೂ ಡಾ. ಇಳಾಳೊಂದಿಗೆ ಅಕ್ರಮ ಸಂಬಂಧ ಹೊಂದಿದ ದೊರೆರಾಜು ಬಗೆಗೆ ಲೇಖಕರಿಗೆ ಯಾವ ನಿಲುವಿದೆ ಎಂಬುದೂ ಗಮನಿಸಬೇಕಾದ ವಿಚಾರ. ಈ ಇಬ್ಬರೂ ಹೆಂಡತಿಯರಿದ್ದೂ ಅನ್ಯರ ಹೆಂಡತಿಯರೊಂದಿಗೆ ಅಕ್ರಮ ಸಂಬಂಧ ಇರಿಸಿಕೊಂಡವರು. ಆದರೆ, ಯಾವುದೇ ಬಲೆಗೆ ಬೀಳದವರು. ಇವರನ್ನು ಇವರಿದ್ದಂತೆಯೇ ಅಥವಾ ಅನಿವಾರ್ಯವಾಗಿ ಇವರ ಹೆಂಡತಿಯರು ಒಪ್ಪಿಕೊಂಡಿದ್ದಾರೆ. ಹಾಗಾಗಿ ಅವರ 'ದಾಂಪತ್ಯ' ಯಾವ ಆಪತ್ತಿಗೂ ಒಳಗಾಗಿಲ್ಲ. (ಇದೂ ಒಂದು ದಾಂಪತ್ಯವೇ? ಎಂದು ಭೈರಪ್ಪನ್ನ ಕೇಳುವಂತಿಲ್ಲ). ಮಾತ್ರವಲ್ಲ, ಇವರನ್ನು ಬಲೆಗೆ ಬೀಳಿಸಲು ಪ್ರಯತ್ನಿಸಿದ ಇವರ ಪ್ರೇಯಸಿಯರನ್ನು ಹೇಗೆ 'ಕೊಡವಿ'ಕೊಳ್ಳಬೇಕೆಂಬುದೂ ಇವರಿಗೆ ತಿಳಿದಿದೆ. ಒಂದು ರೀತಿಯಲ್ಲಿ ಇವರೇ ಈ ಹೆಂಗಸರಿಗೆ ಪರೋಕ್ಷವಾಗಿ ಬುದ್ಧಿ ಕಲಿಸಿದ್ದಾರೆ ಎಂಬ ಸೂಚನೆ ಕೃತಿಯಲ್ಲಿ ಸಿಗುತ್ತದೆ. ಈ ಇಬ್ಬರ ಕುರಿತು ಲೇಖಕರಿಗೆ ಆಕ್ಷೇಪಗಳೇನೂ ಇಲ್ಲ. ಹಾಗಾದರೆ ಲೇಖಕರು ಹೇಳುತ್ತಿರುವುದೇನು? ಇವರಿಬ್ಬರೂ ಮಹಾ ಬುದ್ಧಿವಂತರೆಂದೇ? ಇಷ್ಟೆಲ್ಲಾ ಆಟ ಆಡಿಯೂ ಎಲ್ಲೂ ಸಿಕ್ಕಿ ಹಾಕಿಕೊಳ್ಳದ ಪ್ರಭಾಕರ 'ಆದರ್ಶ ಪುರುಷ'ನೆಂದೇ? ಈ ಇಬ್ಬರಂತೆ ಈ ಕತೆಯ ನಾಯಕರು ತಪ್ಪಿಸಿಕೊಳ್ಳ ಲಾಗಲಿಲ್ಲವಲ್ಲಾ ಎಂಬ ಸೂಚನೆಯನ್ನು ಕೊಡುವ ಉದ್ದೇಶವೇ? ಮಂಗಳೆ ಎಷ್ಟು ತಪ್ಪಿತಸ್ಥಳೋ ಪ್ರಭಾಕರನೂ ಅಷ್ಟೇ ತಪ್ಪಿತಸ್ಥ ಎಂದು ಲೇಖಕರಿಗೆ ಅನ್ನಿಸುವುದೇ ಇಲ್ಲ.

ಡಾ. ಇಳಾರ ವಿಚಾರದಲ್ಲೂ ಇದೇ ಗೊಂದಲ ಕಾಣಿಸಿಕೊಳ್ಳುತ್ತದೆ. ವಿಶ್ವವಿದ್ಯಾಲಯದ ರೀಡರ್ ಆಗಿರುವ ಇಳಾ, ಉನ್ನತ ಹುದ್ದೆಯಲ್ಲಿರುವ ಗಂಡನಿಗಾಗಿ, ಅವನ ಇನ್ನಷ್ಟು ಉನ್ನತಿಗಾಗಿ ಕೆಲಸ ಬಿಡಬೇಕಿತ್ತು, ಹಾಗೆ ಮಾಡದೇ ಇರುವುದೇ ಅವಳ ಅಪರಾಧ. ಇಳಾ ತನ್ನ ರಜೆಯನ್ನು ಹೊಂದಿಸಿಕೊಂಡು ಗಂಡನೊಂದಿಗೆ ಬಾಳಬೇಕು, ತನ್ನ ವೃತ್ತಿಯಲ್ಲೂ ಮುನ್ನಡೆ ಸಾಧಿಸಬೇಕು ಅಂದುಕೊಂಡವಳು. ಆದರೆ, ದೆಹಲಿಗೆ ವರ್ಗವಾದ ಅವಳ ಗಂಡ ಆ ನಂತರ ಒಮ್ಮೆಯೂ ಮನೆಗೆ ಬರುವುದಿಲ್ಲ. ಅವಳೊಂದಿಗೆ ಚರ್ಚಿಸುವುದಿಲ್ಲ. ಅವಳ ಯೋಚನೆಯ ಕುರಿತು ಸಹಾನುಭೂತಿಯನ್ನೂ ಹೊಂದಿರುವುದಿಲ್ಲ. ಹೀಗೆ ವರ್ಷಾನುಗಟ್ಟಲೆ ಗಂಡನಿಂದ ದೂರ ಇರಬೇಕಾಗಿ ಬರುವ, ಅವನಿಂದ ತಿರಸ್ಕೃತಳಾಗುವ, ಅವಮಾನಕ್ಕೆ ಗುರಿಯಾಗುವ ಇವಳು ದೊರೆರಾಜುವಿನೆಡೆಗೆ ದೌರ್ಬಲ್ಯಕ್ಕೆ ಬಿದ್ದರೆ ಅದು ವ್ಯಭಿಚಾರವೆನಿಸುತ್ತದೆ. ಆದರೆ, ವಿಧುರ ಜಯಕುಮಾರ ವರ್ಷಾನುಗಟ್ಟಲೆ ಹೆಣ್ಣಿನಿಂದ ದೂರವಿದ್ದವನು ಮಂಗಳೆಯೆಡೆಗೆ ಆಕರ್ಷಿತನಾದರೆ ಅದು 'ದೇಹಬಾಧೆ' ಎನಿಸುತ್ತದೆ. ಇಳಾ ದೊರೆರಾಜುವಿನಿಂದ ಆಕರ್ಷಿತಳಾದರೂ, ಅವಳು ಆತನನ್ನು ಬಲೆಗೆ ಕೆಡವಿಕೊಂಡಳೆಂದೇ ಚಿತ್ರಿಸುವ ಲೇಖಕರು, ಇಳಾಳನ್ನು ಅತ್ಯಂತ ನಿಕೃಷ್ಟವಾಗಿ ಚಿತ್ರಿಸುತ್ತಾರೆ.

ಇಳಾಳ ಬಗೆಗಿನ ಅವರ ದ್ವೇಷಕ್ಕೆ ಮುಖ್ಯ ಕಾರಣ ಆಕೆ ತರಗತಿಯಲ್ಲಿ ಸ್ತ್ರೀ ಸ್ವಾತಂತ್ರ್ಯವನ್ನು ಬೋಧಿಸುತ್ತಾಳೆ ಎಂಬುದೇ ಆಗಿದೆ. ಮತ್ತು ಭೈರಪ್ಪನವರ ತಿಳಿವಳಿಕೆಯ ಪ್ರಕಾರ ಸ್ತ್ರೀ ಸ್ವಾತಂತ್ರ್ಯವೆಂದರೆ

'ಮುಕ್ತಕಾಮ'ದ ಬೋಧನೆಯೇ ಆಗಿದೆ. ಸ್ತ್ರೀ ಲಂಪಟ ಪ್ರಭಾಕರ, ತನ್ನ ಗುರುವೂ ಆದ ಇಳಾಳಿಗೆ ಬುದ್ಧಿಕಲಿಸಲು ಬರುವವನಾಗಿದ್ದಾನೆ. ಆಕೆ ದೊರೆರಾಜುವೊಂದಿಗೆ ಇದ್ದ ಅಸಭ್ಯ ಭಂಗಿಗಳನ್ನು ಆಕೆಯ ಬೆಡ್‌ರೂಮಿನಲ್ಲಿ ಗುಪ್ತ ಕ್ಯಾಮರಾ ಮುಖಾಂತರ ಸೆರೆ ಹಿಡಿದು ಆಕೆಯ ಗಂಡ ಬ್ಲಾಕ್‌ಮೇಲ್ ಮಾಡುವುದನ್ನು ಭೈರಪ್ಪ ವೈಭವೀಕರಿಸುತ್ತಾರೆ. ಈ ಫೋಟೋಗಳನ್ನು ಆಕೆಯ ಶಿಷ್ಯ ಪ್ರಭಾಕರ ಇಳಾಳಿಗೆ ತೋರಿಸಿ ಬಾಯಿ ಮುಚ್ಚುಸುವಂತೆ ಮಾಡುತ್ತಾನೆ. ಇಲ್ಲಿ ಭೈರಪ್ಪನವರಿಗೆ ಗುರು–ಶಿಷ್ಯ ಇತ್ಯಾದಿ ಯಾವುದೂ ಮುಖ್ಯವಾಗುವುದಿಲ್ಲ. ಲಂಪಟ ಶಿಷ್ಯನೇ ಇವರಿಗೆ ಶ್ರೇಷ್ಠ ಗುರುವಾಗಿ ಕಾಣುವುದನ್ನು ಯಾರ ದೌರ್ಭಾಗ್ಯವೆಂದು ಭಾವಿಸಬೇಕು?

ಮಾನಸಿಕವಾಗಿ ದುರ್ಬಲಳಾಗಿರುವ ವತ್ಸಲೆಯೂ ಸಮರ್ಥ ಗೃಹಿಣಿಯಾಗಬಲ್ಲಳು ಎಂದು ಚಿತ್ರಿಸುವುದಾದರೆ ತೊಂದರೆ ಏನಿಲ್ಲ. ಆದರೆ, ಮಾನಸಿಕ ದುರ್ಬಲತೆಯೇ ಹೆಂಗಸಿನ ಲಕ್ಷಣವಾಗಬೇಕು ಎಂಬ ಭೈರಪ್ಪನವರ ಹಂಬಲ ಮಾತ್ರ ಹಾಸ್ಯಾಸ್ಪದವೆನಿಸುತ್ತದೆ. ಮಾತ್ರವಲ್ಲ, ಅಪಾಯಕಾರಿ ಕೂಡ. ವತ್ಸಲೆಯನ್ನು ಡಾ. ಇಳಾರಿಗೆ ವಿರುದ್ಧವಾಗಿ ಇಡುವುದು, ವಿದ್ಯಾವಂತ ಸ್ತ್ರೀಯರ ಬಗೆಗಿನ ಲೇಖಕರ 'ಭಯ'ವನ್ನು ಹೊರಹಾಕುತ್ತದಷ್ಟೇ.

ಈ ರೀತಿಯ 'ಭಯ' ಹೊಸತೇನಲ್ಲ. ಕಾಲಕಾಲಕ್ಕೆ ಸ್ತ್ರೀಯರು ತಮ್ಮ ಅನನ್ಯತೆಯನ್ನು ಪ್ರಕಟಿಸಿದಾಗಲೆಲ್ಲಾ ಇಂತಹ ಪ್ರತಿಕ್ರಿಯೆಗಳು ಹೊರಬಿದ್ದಿವೆ. ಸ್ಮೃತಿಗಳಿಂದ ಹಿಡಿದು ಆಧುನಿಕ ಕಾಲದ 'ಸ್ತ್ರೀ ನೀತಿ ಕಲ್ಪದ್ರುಮ'ದಂತಹ ಕೃತಿಗಳ ತನಕವೂ ಇದನ್ನು ಕಾಣಬಹುದು. ಹಾಗೆ ನೋಡಹೋದರೆ, ಎಷ್ಟೋ ಸಲ ಅಕ್ಷರಲೋಕದಿಂದ ಹೊರಗಿರುವ ಗಂಡಸರಿಗೆ ಇರುವ ಉದಾರ ಚಿಂತನೆಯೂ ಅಕ್ಷರವನ್ನು ಅಸ್ತ್ರ ಮಾಡಿಕೊಳ್ಳುವ ಗಂಡಸರಿಗೆ ಇಲ್ಲದೇ ಹೋಗುತ್ತದೆ. ಬುಡಕಟ್ಟು ಸಂಸ್ಕೃತಿಗಳಲ್ಲಿನ ಸಮಾನತೆ, 'ನಾಗರಿಕ' ಜಗತ್ತಿನಲ್ಲಿ ಮಾಯವಾಗುತ್ತದೆ. ಇದಕ್ಕೆ ಅಧಿಕಾರವನ್ನು ಹಂಚಿಕೊಳ್ಳಲು ಸಿದ್ಧವಿಲ್ಲದ ಮನಸ್ಥಿತಿಯೂ ಕಾರಣವಾಗಿರುತ್ತದೆ. ಇಂತಹ ಮನಸ್ಥಿತಿಗೆ ಹೆಂಗಸರನ್ನೂ ಪಕ್ಕಾಗಿಸಿ ಒಂದೋ ಗಂಡಿನ ಯಜಮಾನಿಕೆಗೆ ಹೆಣ್ಣನ್ನು ಒಪ್ಪಿಸಲಾಗುತ್ತದೆ. ಇಲ್ಲವೇ ಗಂಡಿನಂತೆಯೇ ತಾನೂ ಯಜಮಾನಿಕೆ ಮಾಡಬೇಕು ಎಂಬ ಆಮಿಷಕ್ಕೆ ಹೆಂಗಸು ಬಲಿ ಬೀಳುತ್ತಾಳೆ. ಸಮಾನತೆ ಇವೆರಡನ್ನೂ ಅಲ್ಲ ಗಳೆಯುತ್ತದೆ. ಸ್ತ್ರೀವಾದ ಹಂಬಲಿಸುತ್ತಿರುವುದು ಇವೆರಡೂ ಅಲ್ಲದ 'ಆದರ್ಶ' ಸ್ಥಿತಿಯನ್ನು. ಈ ಆದರ್ಶ ಸ್ಥಿತಿ ಸಾಕಾರಗೊಳ್ಳಬೇಕಾದರೆ ಮಾನವೀಯ ನೆಲೆಯ ಚಿಂತನೆಯಲ್ಲಿ ನಂಬಿಕೆ ಇರಬೇಕಾಗುತ್ತದೆ. ಯಾರಿಗೆ ಯಾರೂ 'ಸರಕು'ಗಳಲ್ಲದ ಗೌರವಯುತ ಬದುಕಿನೆಡೆಗೆ ಹಂಬಲವಿರಬೇಕಾಗುತ್ತದೆ. ಆದರೆ ಇಂತಹ ಸರಳ, ಸುಂದರ ಜೀವನದೃಷ್ಟಿಯನ್ನು ಅರ್ಥೈಸಿ ಕೊಳ್ಳುವುದಾಗಲೀ, ಒಪ್ಪಿಕೊಳ್ಳುವುದಾಗಲೀ ಸಾಧ್ಯವಾಗದಾಗ ಇಂತಹ 'ಭಯ'ಗಳು ಹುಟ್ಟಿಕೊಳ್ಳುತ್ತವೆ.

ಬೇಜವಾಬ್ದಾರಿ ಗಂಡನನ್ನು ಕಟ್ಟಿಕೊಂಡು, ಬಡತನವನ್ನು ಹೊದ್ದುಕೊಂಡು, ಗಂಡನ ಶಾನುಭೋಗಿಕೆ ಕೆಲಸವನ್ನು ತಾನೇ ಸಮರ್ಥವಾಗಿ ನಿರ್ವಹಿಸಿ, ನಿಭಾಯಿಸಿ, ಸಮಾಜವನ್ನು ಎದುರಿಸಿ, ಮಕ್ಕಳನ್ನು ಸಾಕಿ ಬೆಳೆಸಿದ ತಾಯಿಯ ಮಗನಾದ ಭೈರಪ್ಪ ತನ್ನ ತಾಯಿಯನ್ನೇ ಮರೆತು, ತಂದೆಯ ಬೇಜವಾಬ್ದಾರಿಯನ್ನೇ ಮೆರೆದಿದ್ದು ಅವರ ಮತ್ತು ಅವರ ಅಭಿಮಾನಿಗಳ ದುರಂತ.

---

## 'ಕವಲು' ಮತ್ತು ವಿಕೃತ ವ್ಯಸನಗಳು

■ *ಡಾ. ಕೆ. ಪರೀಘಾ*

ಎಸ್.ಎಲ್. ಭೈರಪ್ಪನವರ 'ಕವಲು' ಕಾದಂಬರಿ ಓದಿದ ತಕ್ಷಣ ನನಗೆ ಅನಿಸಿದ್ದು ಭೈರಪ್ಪನವರ ಮುದಿ ವ್ಯಸನಗಳು, ಅಶ್ಲೀಲತೆ ಮತ್ತು ನೈತಿಕ ಅಧಃಪತನಗಳು ಎಂದಿಗೂ ಆರೋಗ್ಯಪೂರ್ಣ ಸಮಾಜಕ್ಕೆ ಪೂರಕವಾಗಲಾರವು. ಅವು ಸಮಾಜದ ಸ್ವಾಸ್ಥ್ಯ ಹಾಳು ಮಾಡುತ್ತವೆ.

ಭೈರಪ್ಪನವರ ಸ್ತ್ರೀದ್ವೇಷಕ್ಕೆ ಕಾರಣವೇನೋ ತಿಳಿಯದು. ಆದರೆ ಚಳವಳಿ ನಿರತ ಮಹಿಳೆಯರನ್ನು, ಸ್ತ್ರೀವಾದಿಗಳನ್ನು ಕ್ರೂರಿಗಳು, ನೈತಿಕ ಮೌಲ್ಯಗಳಿಲ್ಲದವರು, ಅವಕಾಶವಾದಿಗಳು, ಮೋಸಗಾತಿಯರು ಎಂದು ಚಿತ್ರಿಸುವುದು ಎಷ್ಟರಮಟ್ಟಿಗೆ ಸರಿ? ಸ್ತ್ರೀತ್ವದ ಘನತೆಯನ್ನು ಅವರ ಕ್ಷುದ್ರ ದೃಷ್ಟಿ ಗೌರವಿಸಲಾರದೇನೋ? ಶಿಕ್ಷಿತ–ವಿದ್ಯಾವಂತ, ದುಡಿಯುವ ಹೆಂಗಸರೆಲ್ಲ ಗಂಡಸರ ಕೀಪ್‌ಗಳೆ? ವಿವಾಹಬಾಹಿರ ಸಂಬಂಧ ಹೊಂದಿದವರೆ? 'ಕವಲು' ಕಾದಂಬರಿ ಆರಂಭವಾಗುವದೇ ಅಶ್ಲೀಲತೆ ಯಿಂದ ಮತ್ತು ದುಡಿಯುವ ಹೆಂಗಸನ್ನು ಹಿಯ್ಯಾಳಿಸುವುದರಿಂದ. ಕೃತಿಯ ಉದ್ದಗಲಕ್ಕೂ ಹಾದರದ ಘಟನಾವಳಿಗಳೇ ತುಂಬಿವೆ. ಭೈರಪ್ಪನವರು ಓದಿದ ಹೆಂಗಸನ್ನು–ದುಡಿಯುವ ಹೆಂಗಸನ್ನು ಕನಿಷ್ಠವಾಗಿ ಕಂಡರೆ ಓದದೇ ಬುದ್ಧಿಮಾಂದ್ಯಳಾದ ಪುಟ್ಟಕ್ಕ (ವತ್ಸಲೆ) ಹಾಗೂ ಪುಟ್ಟಕ್ಕನ ತಾಯಿ ವೈಜಯಂತಿಯರು ಮಾತ್ರ ಸರ್ವಗುಣ ಸಂಪನ್ನ ಹೆಂಗಸರಾಗಿದ್ದಾರೆ; ಹಿಂದೂ ಸಾಂಪ್ರದಾಯಿಕ ಹೆಣ್ಣಿನ ತದ್ರೂಪ ವಾಗಿದ್ದಾರೆ. ಇವರ ದೃಷ್ಟಿಯಲ್ಲಿ ಓದಿದ ಹೆಣ್ಣುಗಳೆಲ್ಲ ಸ್ವೇಚ್ಛಾಚಾರಿಗಳು. ಕಾದಂಬರಿಯಲ್ಲಿ ಬರುವ ನಂಜುಂಡೇಗೌಡನ ಬಾಯಿಯಲ್ಲಿ ಆಡಿಸುವ ಅವರ ಮಾತು ಹೀಗಿದೆ.

"ಓದಿದ ಗಂಡಸರೆಲ್ಲ ಎಂಗಸರಂಗಾಗ್ತಾರೆ. ಓದಿದ ಎಂಗಸರೆಲ್ಲಾ ಗಂಡಸರಂಗಾಗ್ತಾರೆ. ಗಂಡಸರು ಗಂಡಸರಾಗಿ ಎಂಗಸರು ಎಂಗಸರಾಗಿ ಇರಬೇಕಾದರೆ ಯಾರೂ ಓದಕೂಡದು." (ಪುಟ.....14). ಈ ವಾಕ್ಯವೇ ಇಡೀ ಕಾದಂಬರಿಯ ಜೀವಾಳವಾಗಿದೆ. ಗಂಡಸು ಗಂಡಸಾಗಿ ಇರಬೇಕಾದ್ರೆ – ಹೆಂಗಸು ಹೆಂಗಸಾಗಿರಬೇಕಾದರೆ ಯಾರೂ ಓದಬಾರದೆಂಬ ಧೋರಣೆ ಜನವಿರೋಧಿ, ಅದರಲ್ಲೂ ಮಹಿಳಾ ವಿರೋಧಿ ಧೋರಣೆಯಾಗಿದೆ.

ಸ್ತ್ರೀಪರ ಕಾನೂನುಗಳು ದುರ್ಬಳಕೆಯಾಗುತ್ತವೆ ಎನ್ನುತ್ತಾರೆ. ಆದರೆ ಇಂತಹ ಕಾನೂನುಗಳಿದ್ದಾಗಲೂ ವರದಕ್ಷಿಣೆಗಾಗಿ ಮದುಮಗಳೇಕೆ ಸುಡಲ್ಪಡುತ್ತಿದ್ದಾಳೆ? ಅತ್ಯಾಚಾರಕ್ಕೆ ಬಲಿಯಾಗುವ ಅಸಂಖ್ಯ ಮಹಿಳೆ 'ಯರಿದ್ದಾರಲ್ಲ? ಗಂಡನ ಕುಡಿತ, ಹೊಡೆತ, ಆರ್ಥಿಕ ದಾರಿದ್ರ್ಯದಲ್ಲಿ ನರಳುವ ಬಹುಸಂಖ್ಯೆಯಲ್ಲಿರುವ ಈ ಮಹಿಳೆಯರು ಭೈರಪ್ಪನವರಿಗೆ ಕಾಣಲಿಲ್ಲವೇಕೆ? ಕೌಟುಂಬಿಕ ದೌರ್ಜನ್ಯ, ಶೋಷಣೆಯಲ್ಲಿ ನಲುಗುತ್ತಿರುವ ಅಸಂಖ್ಯಾತ ಭಗಿನಿಯರನ್ನು ಕಾಪಾಡಲು ಸ್ತ್ರೀಪರ ಕಾಳಜಿಗಳು ಕಾನೂನುಗಳು ಬೇಕಾಗುತ್ತವೆ. ಎಲ್ಲೋ ಒಂದೋ ಎರಡೋ ಇಂತಹ ಕಾನೂನು ದುರ್ಬಳಕೆ ಪ್ರಕರಣಗಳು ಘಟಿಸಿರಬಹುದು. ಆದರೆ ಸಾರಾಸಗಟಾಗಿ ಸ್ತ್ರೀಯರೆಲ್ಲ ಕೆಟ್ಟವರೇ? ಭೈರಪ್ಪನವರ ಈ ಧೋರಣೆ ಸಮಾಜವಿರೋಧಿ, ಮಹಿಳಾ ವಿರೋಧಿ ಧೋರಣೆಯಾಗಿದೆ.

ಕಾದಂಬರಿಯಲ್ಲಿ ಬರುವ ವಕೀಲೆಯರಾದ 'ಮಾಲಾಕೆರೂರ್, ಚಿತ್ರಾಹೊಸೂರ್, 'ಬಾಬ್‌ಕಟ್ ಮಾಡಿಸಿದ, ಕಿವಿಗೆ ಓಲೆಯಿಲ್ಲ, ಮೂಗಿಗೆ ನತ್ತಿಲ್ಲ, ಕೊರಳಿಗೆ ಒಂದೆಳೆ ಸರವಿಲ್ಲ, ಬರಿಹಣೆ ವಿಧವೆಯೋ ಅಥವಾ ಸೂತಕವೂ ಎಂಬಂತಹ ಕಳೆ'. ಎಂದು ವಕೀಲೆಯರನ್ನು ಅವರ ವೇಷಭೂಷಣಗಳಿಗಾಗೇ ಜರಿಯುತ್ತಾರೆ. ದುಡಿಯುವ ಮಹಿಳೆಯರಾದ ಪೊಲೀಸ್ ಇಲಾಖೆಯ ಮಹಿಳಾ ಪೊಲೀಸ್ ಠಾಣೆಯಲ್ಲಿರುವ ಇನ್ಸ್‌ಪೆಕ್ಟರ್ ಆಗಿರುವಾಕೆಗೆ "ಗಂಡು ಮುಖ. ನನ್ನ ಕೂದಲಿಗಿಂತ ತುಂಡಾದ ಕಪ್ಪುಬಣ್ಣ ಹಾಕಿದ ಕ್ರಾಪ್‌ಕಟ್. ಖಾಲಿಹಣೆ, ಬೋಳುಕಿವಿ, ಖಾಕಿಪ್ಯಾಂಟು, ಬಿಗಿಯಾಗಿ ಹಿಸುಕಿ ಚಪ್ಪಟೆ ಮಾಡಿದಂತೆ ಎದೆಯನ್ನು ಸುತ್ತುವರಿದ ಖಾಕಿಕೋಟು, ಉರಿಯುವ ದರ್ಪದ ಕಣ್ಣುಗಳು." (ಪುಟ–10) ಮುಂದುವರಿದು ಇದೇ ಪುಟದಲ್ಲಿ "ಖಾಕಿ ಕೋಟಿನ ಒಳಗೆ ಚಪ್ಪಟೆಗೊಂಡ ಎದೆಯದಾದರೂ ಹೆಂಗಸಿನ ಒಳ ಆಕಾರವನ್ನು ಬಿಚ್ಚಿಡದ ಸುತ್ತಳತೆ, ಹೆಣ್ಣಿಗೆ ಪ್ರಕೃತಿ ದತ್ತವಾದ ದಪ್ಪ ಅಂಡುಗಳು" (ಪುಟ–11)

"ಇನ್ಸ್‌ಪೆಕ್ಟರ್ ಶೀಲಾರಾಣಿ ಗಂಡಸರು ಅಂದರೆ ಉರಿ ಉರಿ ಉರೀತಾಳೆ. ಪ್ರಪಂಚದಿಂದ ಗಂಡಸು ಜಾತೀನೇ ನಿಕಾಲ್ ಮಾಡಿ ಪ್ರಮೀಳ ರಾಜ್ಯ ಮಾಡಬೇಕು ಅಂತಾಳೆ" (ಪುಟ–14) ಕಾದಂಬರಿಯ ನಂಜುಂಡೇಗೌಡನ ಪಾತ್ರದ ಮೂಲಕ ಹೇಳಿಸುವ ಮಾತು ಇಂತಿದೆ. "ಸರ್ಕಾರಿ ಪ್ರಾಸಿಕ್ಯೂಟರೂ ಎಂಗಸೇ, ಜಡ್ಜಿಯೂ ಎಂಗಸೇ ಆಗಿರಬೇಕು ಅಂತಾ ಚಳವಳಿ ಮಾಡ್ತಾರಲ್ಲಾ ಎಂಗಸರು ಗುಂಪುಕಟ್ಟಿಕೊಂಡು ಕಾಲೇಜು ಉಡುಗೀರ್ನ ಗುಡ್ಡೆ ಹಾಕ್ಕೊಂಡು ಧಿಕ್ಕಾರ ಕೂಗಿಸ್ತಾ ಗೊತ್ತಿಲ್ವರಾ ನಿಮಗೆ?" (ಪುಟ–16) ಹೀಗೆ ಪಾತ್ರಗಳ ಮೂಲಕ ದುಡಿಯುವ ಮಹಿಳೆಯರನ್ನು ಚಳವಳಿನಿರತ ಹೋರಾಟಗಾರ್ತಿಯರನ್ನು ಕಾಣುತ್ತಾರೆ. ಇದು ರೋಗಗ್ರಸ್ಥ ಮನಸಲ್ಲದೆ ಇನ್ನೇನು? "ಕ್ರಾಪ್‌ಕಟ್ ಮಾಡಿಸಿ ಕೊಂಡಿದ್ದ ಬರೀ ಹಣೆ, ಬರೀ ಮೊಣಕೈಗಳ, ಖಾದಿಯಂತೆ ಕಾಣುವ ಬೂದು ಬಣ್ಣದ ಸೀರೆಯುಟ್ಟು" (ಪುಟ–26) ಇದು ಮಹಿಳಾ ಚಳವಳಿಗಾರರೊಬ್ಬರ ವರ್ಣನೆ. ಹೀಗೆ ಮಹಿಳಾ ಚಳವಳಿಗಾರರನ್ನು ಕಾದಂಬರಿಯ ಪಾತ್ರವಾದ ಜಯಕುಮಾರನ ಮೂಲಕ ಕಾಣುತ್ತಾರೆ. ಕಾದಂಬರಿಯ ಹೀರೋ ಜಯಕುಮಾರನೇ ಆದರೂ ಅವನ ಬದುಕು, ನಡತೆ ಮೌಲಿಕವಾದವುಗಳಲ್ಲ. ಬದುಕಿನಲ್ಲಿ ಯಾವುದೇ ಘನಕಾರ್ಯ ಮಾಡದವನು ದೆಹಲಿಯ ಸ್ಟಾರ್‌ಪ್ಯಾರಡೈಸ್‌ನಲ್ಲಿ ತರಹೇವಾರಿ ಹೆಂಗಸರ ಸಹವಾಸ ಮಾಡಿ–ಕಾಲ್‌ಗರ್ಲ್ ಜೊತೆಗೆ ಪೊಲೀಸರಿಗೆ ಸಿಕ್ಕಿಬಿದ್ದು ಜೈಲಿನಲ್ಲಿ ಕಾಲ ಕಳೆದು, ತನ್ನ "ಪುರುಷತ್ವವು ಅಖಂಡವಾಗಿ ಸಾಬೀತಾಗಿದೆ" (ಪುಟ–168) ಎಂದುಕೊಳ್ಳುವ ಭಂಡ ಪುರುಷ. ಇವನ ಸನಾತನ ಮೌಲ್ಯಗಳೇ ಭೈರಪ್ಪನವರವೂ ಹೌದು.

ಗಂಡಸರು ಸಜ್ಜನರು, ಮುಗ್ಧರು, ಅವರು ಹೆಂಡತಿಯಲ್ಲದವಳೊಡನೆ ಕೂಡಿದರೂ ಅದು ಹಾದರವಲ್ಲ, "ಶರೀರ ಬಾಧೆ"ಗಾಗಿ ಹುಡುಕಿಕೊಂಡ ಪರಿಹಾರ ಮಾತ್ರ. ಜಯಕುಮಾರನ ಮೊದಲ ಹೆಂಡತಿ ಸತ್ತು, ಎರಡನೆ ಹೆಂಡತಿ ಮಂಗಳೆಯನ್ನು ಕಟ್ಟಿಕೊಂಡರೂ, ಹೊರಸಂಬಂಧಗಳನ್ನು ಹುಡುಕಿಕೊಂಡು ಹೋದರೂ, ಅಲ್ಲಿಯೂ ತೃಪ್ತಿಪಡಿಸಲಾಗದ ಹೆಂಡತಿಯ ಮೇಲೆಯೇ ಆರೋಪ ಹೊರಿಸುತ್ತಾರೆ. ಜಯಕುಮಾರನ ಸೋದರಳಿಯ "ಲಿವಿಂಗ್ ಟುಗೆದರ್"ದಲ್ಲಿ ವಿಶ್ವಾಸವಿಟ್ಟು, ಲಿಂಡ್ಸಿ, ಟ್ರೇಸಿಯೊಂದಿಗಿದ್ದು ಕೊನೆಗೊಮ್ಮೆ ಅಮೆರಿಕದ ಕಾನೂನಿಂದಾಗಿ ಅವನ ಆಸ್ತಿ ಹಣ ಕಳೆದುಕೊಂಡು ಭಾರತಕ್ಕೆ ಪಾಪರ್ ಆಗಿ ಬಂದು ಬುದ್ಧಿಮಾಂದ್ಯ ವತ್ಸಲೆ (ಪುಟ್ಟಕ್ಕ) ಜಯಕುಮಾರನ ಮಗಳನ್ನು ಮದುವೆಯಾಗಿ ತೃಪ್ತಿಪಟ್ಟುಕೊಳ್ಳುತ್ತಾನೆ. ಇವರ ಪ್ರಕಾರ ಹೆಣ್ಣೆಂದರೆ, ಕರೆದಾಗ ಹಾಸಿಗೆಯಾಗುವ, ಲಕ್ಷಣವಾಗಿ ಸೀರೆ ಕುಪ್ಪಸ ತೊಟ್ಟು, ಮಾಂಗಲ್ಯಧರಿಸಿ, ಸರ, ಕಿವಿ ಓಲೆ, ಉದ್ದನೆ ಜಡೆ, ತಲೆತುಂಬ ಮಲ್ಲಿಗೆಯ ದಂಡೆ, ರೇಷ್ಮೆ ಸೀರೆ, ಕೈತುಂಬ ಬಳೆ, ಕಾಲುಂಗುರ, ಕಾಲು ಚೈನು ಧರಿಸಿದ ಸುಮಂಗಲೆಯರು. ಜಯಕುಮಾರನಿಗೆ ಪಿ.ಎ. ಆಗಿದ್ದ ಸುಮಂಗಲೆ ಅವನ ಕಾಮೋಪಶಮನದ ವಸ್ತು ಮಾತ್ರ! ಗಂಡಸರು ಮಾಡುವ ಹಾದರಕ್ಕೆ 'ಉಪಶಮನ'ದ ಬಿಡುಗಡೆ. ಭೈರಪ್ಪನವರಿಗೆ ಏಕೆ ಆರೋಗ್ಯಪೂರ್ಣವಾಗಿ ಚಿಂತಿಸಲು ಸಾಧ್ಯವಾಗಿಲ್ಲ. ಪಾತ್ರಗಳಲ್ಲಿ ಪ್ರೀತಿ, ವಿಶ್ವಾಸ, ನೈಜತೆಯ ನೆಲೆಗಳೇ ಇಲ್ಲ. ಲೇಖಕರ ಮುದಿ ವ್ಯಸನಗಳಿಗೆ ಬಲಿಯಾದ ಪಾತ್ರಗಳು ಆರೋಗ್ಯಪೂರ್ಣವಾಗಿ ಬೆಳೆಯುವುದೇ ಇಲ್ಲ. ಇದು ಲೇಖಕರ ದೌರ್ಬಲ್ಯವೂ ಹೌದು.

ಮಹಿಳಾ ಹೋರಾಟಕ್ಕೆ ಅದರದೇ ಆದ ಚರಿತ್ರೆಯಿದೆ, ಪಾವಿತ್ರ್ಯವಿದೆ. ಅಂತಹ ಧೀಮಂತ ಹೋರಾಟಗಾರ್ತಿಯರ ಹೋರಾಟದ ಫಲವಾಗಿ ಕೆಲವೊಂದು ಸ್ತ್ರೀಪರ ಕಾನೂನುಗಳು ರಚನೆಯಾಗಿವೆ. ಹೆಣ್ಣುಮಕ್ಕಳು ಸಹ ಸ್ವಲ್ಪ ಸ್ವಲ್ಪ ಸ್ವಾತಂತ್ರ್ಯದ ಗಾಳಿ ಉಸಿರಾಡುತ್ತಿದ್ದಾರೆ. ತಮ್ಮ ಸ್ವಹಿತಾಸಕ್ತಿಗಳನ್ನು ಬದಿಗೊತ್ತಿ ಮಹಿಳಾ ಸಂಘಟನೆಯಲ್ಲಿ ತೊಡಗಿ ಅವರ ನ್ಯಾಯಯುತ ಬೇಡಿಕೆಗಳನ್ನು ಈಡೇರಿಸುವದಕ್ಕಾಗಿ ಸವಲತ್ತುಗಳಿಗಾಗಿ ಹೋರಾಡುತ್ತಿರುವ ವಿವಿಧ ಸೈದ್ಧಾಂತಿಕ ನೆಲೆಗಳಿಂದ ಬಂದ ಅನೇಕ ಹೋರಾಟಗಾರ್ತಿಯರು ನಮ್ಮ ಮಧ್ಯೆ ಇದ್ದಾರೆ. ಬ್ರಿಟಿಷರ ಗುಂಡುಗಳು ದೇಹವನ್ನು ಛಿದ್ರ ಮಾಡುತ್ತಿದ್ದರೂ ಬಂಗಾಲದ ಮಾತಂಗಿನಿ ಹಸ್ರಾ ರಾಷ್ಟ್ರಧ್ವಜ ನೆಲಕ್ಕೆ ಬೀಳದಂತೆ ಎತ್ತಿ ಹಿಡಿದಿದ್ದಳು. ರಾಷ್ಟ್ರದ ಸ್ವಾತಂತ್ರ್ಯ ಹೋರಾಟ, ತೆಲಂಗಾಣಾ ಹೋರಾಟದ ಮಹಾ ಮಾತೆಯರು ಕೆಲವರು ಇನ್ನೂ ನಮ್ಮ ಮಧ್ಯೆ ಬದುಕಿದ್ದಾರೆ. ಆದರೆ ಭೈರಪ್ಪನವರು ನಂಬಿದ ಸಿದ್ಧಾಂತದಡಿಯಲ್ಲಿ ಅವರಿಗೆ ಕಾಣಸಿಕ್ಕ ಮಹಿಳೆಯರು, ವಕೀಲೆಯರು, ಹೋರಾಟಗಾರ್ತಿಯರು ಬಹುಶಃ ಅಂಥವರೇ ಆಗಿರಬಹುದು. ಆದರೆ ಅಂತಹ ಕೆಲ ಮಹಿಳೆಯರೇ ಚಳವಳಿಗಾರ್ತಿಯರಲ್ಲ. ಅವರಿಗೆ ಕಡಿಮೆ ಸಂಬಳಪಡೆದು ಶ್ರಮವಹಿಸಿ ದುಡಿಯುತ್ತಿರುವ ಅಂಗನವಾಡಿ ಕಾರ್ಯಕರ್ತೆಯರೇಕೆ ಕಾಣಲಿಲ್ಲ? ಅನೇಕ ರೈತ ಮಹಿಳೆಯರೇಕೆ ಕಾಣಲಿಲ್ಲ?

ಮಹಿಳಾ ಹೋರಾಟಗಾರ್ತಿಯರನ್ನು ಅವರು ಕಾಣುವುದು ಹೀಗೆ! ಸ್ತ್ರೀ ಸ್ವಾತಂತ್ರ್ಯ ಎಂದರೆ ಮುಕ್ತ ಲೈಂಗಿಕತೆ, ಅವಕಾಶವಾದಿತನ, ತನ್ನ ಲಾಭಕ್ಕಾಗಿ ಗಂಡಸರ ಕೀಪ್‌ಗಳಾಗುವವರು. ಚಳವಳಿಗಾರ್ತಿಯರೆಂದರೆ ಚಿತ್ರಾ ಹೊಸೂರು, ಮಾಲಾ ಕೆರೂರ್‌ರಂತಹ ವಕೀಲೆಯರೇ ಎಂದುಕೊಂಡಿದ್ದಾರೆ. ಸ್ಟಾರ್ ಪ್ಯಾರಡೈಸ್ ಮೇಲೆ ಪೊಲೀಸ್ ದಾಳಿಯಿಂದ ಸೆರೆ ಸಿಕ್ಕವರಲ್ಲಿ ಜಯಕುಮಾರನೂ ಇದ್ದಾನೆ. ಠಾಣೆಯ ಮುಂದೆ ಘೋಷಣೆ ಕೂಗುತ್ತಿದ್ದ ಚಳವಳಿಕಾರ್ತಿಯರಿಂದ ಭೈರಪ್ಪ ಆಡಿಸುವ ಘೋಷಣೆಗಳು ಇಂತಿವೆ. 'ಮಹಿಳಾ ಶೋಷಕರಿಗೆ ಮರಣದಂಡನೆಯಾಗಲಿ', 'ಮಾಂಸಸುಖಿಗಳಿಗೆ ನೇಣುಗಂಬವಾಗಲಿ'.

ಸ್ತ್ರೀವಾದಿಗಳು, ಹೋರಾಟಗಾರ್ತಿಯರು ಈ ಲೇಖಕರಿಗೆ ಕ್ಷುದ್ರವಾಗಿ ಕಾಣಲು ಅವರ ವಿಕೃತ ಮನಸ್ಸೇ ಕಾರಣವಾಗಿದೆ. ಲಂಕೇಶ್ ಭೈರಪ್ಪನವರ ಬಗ್ಗೆ "ಬರಡು ಮನಸಿನ ತಡೆರಹಿತ ಅಶ್ಲೀಲತೆಯ" ಮತ್ತು "ಪ್ರೀತಿ ಸಹಾನುಭೂತಿಯಿಲ್ಲದ ಬರವಣಿಗೆ" ಎಂದದ್ದು ಬಹಳಷ್ಟು ಸೂಕ್ತವಾಗಿದೆ. ಇಂತಹ ಕೆಟ್ಟ ಕಾದಂಬರಿ ಓದುವುದು ಸಮಯ ವ್ಯರ್ಥ ಮಾಡಿದಂತೆಯೇ ಸರಿ. ನಾನು ಬದುಕಿನಲ್ಲಿ ಓದಿದ ಅತ್ಯಂತ ಕೆಟ್ಟ ಕಾದಂಬರಿ ಇದಾಗಿದೆ. ಇದರಲ್ಲಿ ಭೈರಪ್ಪನವರ ಮುದಿ ವ್ಯಸನಗಳು, ವಿಕೃತ ಲೈಂಗಿಕತೆ ಬಿಟ್ಟರೆ ಬೇರೇನೂ ಸಂದೇಶವಿಲ್ಲ.

●



# ಪಕ್ಷಾಧರಿತ ಲಿಂಗರಾಜಕಾರಣದ ಒಂದು ವಿಮರ್ಶಾ ನೋಟ

*ಎಚ್.ಎಸ್. ಚಂಪಾವತಿ*

'ಅಚಲ' 1985ರ ಮಾರ್ಚಿನಿಂದ 2007ರ ಜೂನ್‌ವರೆಗೆ ಪ್ರಕಟವಾದ ಮಹಿಳಾ ಪತ್ರಿಕೆ. ಇದರ ಸಂಪಾದಕರಾದ ಎನ್. ಗಾಯತ್ರಿ ತಾವು ಬರೆದ ಸಂಪಾದಕೀಯಗಳನ್ನು 'ಸಂಚಲ' ಎಂಬ ಹೆಸರಿನಲ್ಲಿ ಪ್ರಕಟಿಸಿದ್ದಾರೆ. ಈ ಪುಸ್ತಕದಲ್ಲಿ ಇರುವ 109 ಸಂಪಾದಕೀಯಗಳು ಮುಖ್ಯವಾಗಿ ಮಹಿಳೆಯರಿಗೆ ಸಂಬಂಧಿಸಿದವಾಗಿದ್ದು–ಹಲವಾರು ವಿಚಾರಗಳಲ್ಲಿ ತಮ್ಮದೇ ಆದ ನಿಲುವು, ಪ್ರತಿಭಟನೆ, ವ್ಯಾಖ್ಯಾನಗಳನ್ನು ಗಾಯತ್ರಿ ನೀಡುತ್ತಾರೆ. ಮಾರ್ಚ್ 1985ರ ಮೊದಲ ಸಂಪಾದಕೀಯ ಅಂದು ದಲಿತ, ಮಹಿಳಾ ಚಳವಳಿಗಳಲ್ಲಿ ಪ್ರತಿಭಟನೆಯ ಅಲೆ ಎಬ್ಬಿಸಿದ್ದ ಹುಣಸೇಕೋಟೆ ಅನಸೂಯಮ್ಮನ ಮೇಲೆ ನಡೆದ ಅತ್ಯಾಚಾರ ಪ್ರಕರಣವನ್ನು ಪ್ರಸ್ತಾಪಿಸಿದ್ದರೆ, ವಿದಾಯದ ಮುಂಚಿನ 108ನೆಯ ಸಂಪಾದಕೀಯ ಕರ್ನಾಟಕದಲ್ಲಿ ರಾತ್ರಿ ಪಾಳಿ ನಿಷೇಧ ಕುರಿತ ಗೆಜೆಟ್ ಪ್ರಕಟಣೆಯ ಪ್ರಸ್ತಾಪವನ್ನು ಮಾಡುತ್ತದೆ. ಈ ಮಧ್ಯದ ಸಂಪಾದಕೀಯಗಳಲ್ಲಿ ಜಾರಿಗೆ ಬಂದ ಕಾನೂನುಗಳ ಬಗ್ಗೆ ವಿಮರ್ಶಾತ್ಮಕ ನಿಲುವುಗಳಿವೆ. ಪಿ.ಟಿ. ಉಷಾ, ಕಲ್ಯಾಣಮ್ಮ, ನ್ಯೂಯಾರ್ಕಿನ ವೀರ ಮಹಿಳೆಯರು, ಭಾಗೀರಥಿಬಾಯಿ ಪುರಾಣಿಕ, ಗೀತಾ ಮುಖರ್ಜಿ, ಕ್ಯಾಪ್ಟನ್ ಲಕ್ಷ್ಮಿ ಸೆಹಗಾಲ್‌ರವರ ಕುರಿತಾದ ಬರಹಗಳಿವೆ. ಭಾವ್ರಿದೇವಿ ಹಾಗೂ ಸಾಮೂಹಿಕ ಅತ್ಯಾಚಾರಕ್ಕೆ ಬಲಿಯಾದ ಯುವತಿಯರು, ಬೆತ್ತಲೆ ಪ್ರಕರಣಕ್ಕೆ ಒಳಗಾದ ಮಹಿಳೆಯರು, ಸತಿಪದ್ಧತಿ, ಮೀಸಲಾತಿ, ಕೋಮುಸೌಹಾರ್ದತೆ, ಕೌಟುಂಬಿಕ ಹಿಂಸೆ, ರಾಜಕೀಯ ವಿದ್ಯಮಾನಗಳ ವಿಶ್ಲೇಷಣೆ – ಹೀಗೆ ಅಂದಿಗೂ ಹಾಗೂ ಇಂದಿಗೂ ಪ್ರಸ್ತುತವಾಗಿರುವ ಹಲವಾರು ವಿಚಾರಗಳಿಗೆ ಗಾಯತ್ರಿ ಸಂವೇದನಾಶೀಲರಾಗಿ ಸ್ಪಂದಿಸಿರುವುದು ಸಂಪಾದಕೀಯಗಳಲ್ಲಿ ವ್ಯಕ್ತವಾಗುತ್ತದೆ. 1985ರಿಂದ 2007ರ ಜೂನ್‌ವರೆಗೆ ನಡೆದು ಹೋದ ಹಲವಾರು ಚಾರಿತ್ರಿಕ ಘಟನೆಗಳ ದಾಖಲೆಯು ಇದಾಗಿದೆ. ಹಾಗೆಯೇ ಒಟ್ಟು ಸಾಮಾಜಿಕ, ರಾಜಕೀಯ, ಆರ್ಥಿಕ ಆಯಾಮಗಳ ಒಂದು ವಿಮರ್ಶಾತ್ಮಕ ನೋಟವೂ ಇದಾಗಿದೆ.

ತಮ್ಮ ನಿಲುವುಗಳನ್ನು ಗಾಯತ್ರಿಯವರು ಕೆಲವೊಮ್ಮೆ ಖಾರವಾಗಿ, ವ್ಯಂಗ್ಯವಾಗಿ, ಸಿಟ್ಟು, ಕೋಪದಿಂದ, ಖಂಡ ತುಂಡವಾಗಿ ಹಾಗೂ ಕೆಲವೊಮ್ಮೆ ಯಾಂತ್ರಿಕವಾಗಿ ವ್ಯಕ್ತಪಡಿಸುತ್ತಾರೆ. ಕೆಲವೊಂದು ಸಂಪಾದಕೀಯಗಳನ್ನು ಹೆಚ್ಚಿನ ವಿವರಗಳ ಹಿನ್ನೆಲೆಯಲ್ಲಿ ಪ್ರಸ್ತಾಪಿಸಿದರೆ, ಕೆಲವೊಮ್ಮೆ ವೈಚಾರಿಕ ನೆಲೆಗಟ್ಟಿನ ಹಿನ್ನೆಲೆಯಲ್ಲಿ ವಿಶ್ಲೇಷಿಸಿದ್ದಾರೆ. ಈ ಕೆಳಗಿನ ಕೆಲವು ಉದಾಹರಣೆಗಳಲ್ಲಿ ಕೋಪ, ಸಿಟ್ಟು, ವ್ಯಂಗ್ಯ, ಖಂಡತುಂಡವಾಗಿ ಹೇಳುವ ಬಗೆಯನ್ನು ಗಮನಿಸಬಹುದು.

'ವಿವಾಹ ವಿಚ್ಛೇದನ ಹಕ್ಕುಗಳಿಗೆ ರಕ್ಷಣೆ' ಕುರಿತು ಲೋಕಸಭೆಯಲ್ಲಿ ಮಂಡಿಸಿದ ಮಸೂದೆ ಕುರಿತು 1986ರ ಮಾರ್ಚ್ ಸಂಪಾದಕೀಯದಲ್ಲಿ ಹೀಗಿದೆ: 'ಈ ಮಸೂದೆಯನ್ನು ಬೆಂಬಲಿಸುತ್ತಿರುವ ಪ್ರತಿನಿಧಿಗಳಿಂದ ಕೆಲವು ಎಂ.ಪಿ.ಗಳಿಗೆ ಮುಸ್ಲಿಂ ಹೆಣ್ಣಿನ ಬಗ್ಗೆ ಕಿಂಚಿತ್ತಾದರೂ ಕಾಳಜಿಯಿದ್ದಿದ್ದರೆ ಅಧಿಕಾರದ ಲಾಲಸೆಯಿಂದ **ಅಧಿಕಾರಸ್ಥರ ಬೂಟು ನೆಕ್ಕುತ್ತಿರಲಿಲ್ಲ'.**

1987ರ ಮಾರ್ಚ್ ಸಂಪಾದಕೀಯದಲ್ಲಿ

'ವಿಧವೆಯ ಸ್ಥಿತಿ ಸಾಯುವುದಕ್ಕಿಂತ ಕಠಿಣ ಎನ್ನಿಸುವ ಬದುಕು ಭಾರತೀಯ ಮಹಿಳೆಗಿದ್ದರೆ **ಅಂತಹ ಸಮಾಜಕ್ಕೆ ಧಿಕ್ಕಾರ!'**

ಜುಲೈ 1988ರ ಸಂಪಾದಕೀಯದಲ್ಲಿ ಪುರಿಯ ಶಂಕರಾಚಾರ್ಯ ಸ್ವಾಮಿನಿರಂಜನ ವಿಧವೆಯರು ಬದುಕಲು ಅನರ್ಹರು ಎಂದು ಹೇಳಿದುದನ್ನು ಟೀಕಿಸುತ್ತಾ–

ಸ್ವಾಮಿಯ ಹೇಳಿಕೆಗಳಿಗೆ ಅಸಮ್ಮತಿ ಸೂಚಿಸುವ ನಾಟಕವಾಡುತ್ತಿರುವ ಬಹಳಷ್ಟು ಮಂದಿ ಒಟ್ಟಾರೆಯಾಗಿ ಸ್ವಾಮಿಯನ್ನು **ನಿರಾಕರಿಸುವ ಧೈರ್ಯ ಮಾಡುವಿರಾ? ಅವನ ಕೈಗೆ ಕೋಳ ತೊಡಿಸಲು ಒತ್ತಾಯ ಮಾಡುವಿರಾ?**

1990ರ ಜನವರಿಯ ಸಂಪಾದಕೀಯದಲ್ಲಿ

ತಾಳಿ ಭಾಗ್ಯ ಕೊಡಿಸಿ ಪುಣ್ಯ ಕಟ್ಟಿಕೊಂಡ ಸರ್ಕಾರಕ್ಕೆ ಮೋತಿ ಮಹಂತನು ನಾರಿಯ **ಬೆತ್ತಲೆ ಸೇವೆ ಮಾಡಿದ್ದಕ್ಕೆ ಶಿಕ್ಷೆ ಕೊಡಿಸುವುದು ಕಷ್ಟವಾಯಿತು.**

ಮಾರ್ಚ್ 1994ರಲ್ಲಿ

ವ್ಯವಸ್ಥಾಪಕರೇ ಆಹ್ವಾನಿಸಿರುವ ಮಹಿಳೆಯರನ್ನು ಅಪಮಾನಿಸುವ ದಾರ್ಷ್ಟ್ಯ ತೋರಿದ ಸ್ವಾಮೀಜಿಗೆ ಧಿಕ್ಕಾರವಿರಲೇಬೇಕು! ಅಂತಹ ಸ್ವಾಮೀಜಿಯನ್ನು **ಒಪ್ಪಿಕೊಳ್ಳುವ, ಆರಾಧಿಸುವ ಮನಸ್ಸುಗಳ ಭಂಡತನಕ್ಕೆ ಏನೆನ್ನಬೇಕು?**

ಹೀಗೆ ಖಡಾ ಖಂಡಿತವಾಗಿ, ಕಡ್ಡಿ ಮುರಿದಂತೆ ಹೇಳುವ ಇವರ ರೀತಿಯನ್ನು ಗಮನಿಸಬಹುದು.

ಶಾಬಾನೋ ಪ್ರಕರಣ ಹಲವಾರು ಬಾರಿ ಗಾಯತ್ರಿಯವರ ಸಂಪಾದಕೀಯಗಳಲ್ಲಿ ಚರ್ಚಿತವಾಗಿರುವ ವಿಚಾರ. 1985ರ ಜುಲೈನಿಂದ ಜೂನ್ 2005ರ ವರೆಗೆ ಹಲವಾರು ಬಾರಿ ಇವರು ಈ ವಿಚಾರವನ್ನು ಪ್ರಸ್ತಾಪಿಸುತ್ತಾರೆ. ಚಾರಿತ್ರಿಕ ಸಂದರ್ಭಗಳು, ಚಳವಳಿಯ ಮಜಲುಗಳು, ಆಯಾ ಘಟ್ಟದ ಆಲೋಚನೆ, ಚರ್ಚೆಗಳು ಇವರ ಸಂಪಾದಕೀಯಗಳನ್ನು ಪ್ರಭಾವಿಸಿವೆ ಎನ್ನಲು, ಹಾಗೂ ಇವರ ವಿಶ್ಲೇಷಣೆ ಹಲವಾರು ಭಿನ್ನ




**ಸಂಚಲ**
ಲೇ : ಡಾ॥ ಎನ್. ಗಾಯತ್ರಿ
ಪ್ರ : ಮಾ–ಲೆ ಪ್ರಕಾಶನ
ಪುಟ : 232
ಬೆಲೆ : ರೂ. 120/–

ಭಿನ್ನ ಆಯಾಮಗಳನ್ನು ಒಳಗೊಳ್ಳುತ್ತಾ ಹೋಗುವ ಬಗೆಯನ್ನು ಈ ಕೆಳಗಿನ ಉದಾಹರಣೆಗಳಲ್ಲಿ ಗುರುತಿಸಬಹುದಾಗಿದೆ.

ಶಾಬಾನೋಗೆ ನಿರ್ವಹಣಾ ಭತ್ಯೆ ನೀಡಬೇಕೆಂದು ಸುಪ್ರೀಂಕೋರ್ಟ್ ನಿರ್ಣಯ ಬಂದಾಗ ಸಮಾನ ಸಿವಿಲ್ ಸಂಹಿತೆಯು ಜಾರಿಗೆ ಬರುವಂತೆ ಮಾಡುವಲ್ಲಿ **ಇದು ಮೊದಲು ಹೆಜ್ಜೆ** ಎಂದು 1985ರ ಜುಲೈ ಸಂಪಾದಕೀಯದಲ್ಲಿ ಬರೆಯುತ್ತಾರೆ.

ಜನವರಿ 1986ರ ಸಂಪಾದಕೀಯದಲ್ಲಿ ವೋಟಿನ ಬ್ಯಾಂಕಿಗೆ ಬಲಿಯಾದ ಶಾಬಾನೋ ಸುಪ್ರೀಂಕೋರ್ಟಿನಿಂದ ತನ್ನ ಅಪೀಲನ್ನು ಹಿಂತೆಗೆದುಕೊಂಡ ಬಗ್ಗೆ ಬರೆಯುತ್ತಾ ಮಾರ್ಗರೇಟ್ ಆಳ್ವಾ-ಮುಸ್ಲಿಂ ವೈಯಕ್ತಿಕ ಕಾನೂನಿಗೆ ಕೈ ಹಾಕುವುದಾಗಲೀ, ಶರೀಯತ್‌ಗೆ ವಿರೋಧಿಯಾದುದನ್ನು ಮಾಡುವ ಇಚ್ಛೆಯಾಗಲೀ ಕೇಂದ್ರ ಸರ್ಕಾರಕ್ಕೆ ಇಲ್ಲ ಎಂದು ಹೇಳಿದುದನ್ನು ಪ್ರಸ್ತಾಪಿಸುತ್ತಾರೆ.

ಮಾರ್ಚ್ 1986ರ ಸಂಪಾದಕೀಯದಲ್ಲಿ ಲೋಕಸಭೆಯಲ್ಲಿ ಮಂಡಿಸಿದ 'ವಿವಾಹ ವಿಚ್ಛೇದನ ಹಕ್ಕಿನ ರಕ್ಷಣೆ' ಮಸೂದೆಯ ಬಗ್ಗೆ ಮಾತನಾಡುತ್ತಾ.... ಶರೀಯತ್‌ಗೆ ಕೈಹಾಕದಿರುವುದು ಮಹಾ ಘನಕಾರ್ಯವೆಂದು ಕೊಂಡಿರುವ ಇವರಿಗೆ ಕಣ್ಣೆದುರಿಗೆ ಕಾಣುವ ನಗ್ನ ದೌರ್ಜನ್ಯವನ್ನು ಸಹಿಸುವುದು, ಪ್ರೋತ್ಸಾಹಿಸುವುದು ಸಣ್ಣತನವೆನಿಸುವುದಿಲ್ಲವೇ? ಮುಸ್ಲಿಂ ಹೆಣ್ಣಿನ ಸ್ವಾತಂತ್ರ್ಯ ನಂಬುವ, ಪ್ರೀತಿಸುವ **ಎಲ್ಲಾ ಜನಾಂಗದ ಸ್ತ್ರೀ ಪುರುಷರೂ ಒಕ್ಕೊರಲಿನಿಂದ ಈ ಮಸೂದೆಯ** ವಿರುದ್ಧ ಸಂಘಟಿತರಾಗಿ ಭಾರತದ ಎಲ್ಲಾ ಮಹಿಳೆಯರಿಗೂ ಅನ್ವಯವಾಗುವಂತಹ ಸಮಾನ ಸಿವಿಲ್ ಸಂಹಿತೆಯು ಜಾರಿಗೆ ಬರುವಂತೆ ಶ್ರಮಿಸಬೇಕು ಎನ್ನುತ್ತಾರೆ.

ಮಾರ್ಚ್ 1987ರ ಸಂಪಾದಕೀಯದಲ್ಲಿ 'ಭಾರತೀಯ ಮಹಿಳೆ' ಎಂಬ ಭಾವೈಕ್ಯದ ಪರಿಕಲ್ಪನೆಯನ್ನು ಕಲ್ಪಿಸಲಾಗದ ಸ್ಥಿತಿಗೆ ನಮ್ಮ ಸಾಮಾಜಿಕ ಪರಿಸ್ಥಿತಿ ಅವಳನ್ನು ದೂಡಿದೆ ಎನ್ನುತ್ತಾ **ಸಮಾನ ಸಿವಿಲ್ ಸಂಹಿತೆ ಭಾರತೀಯ ಮಹಿಳೆಯನ್ನು ಭಾವೈಕ್ಯದತ್ತ ಒಯ್ಯುವ ಮೊದಲ ಹೆಜ್ಜೆ** ಎನ್ನುತ್ತಾರೆ.

ಈ ಭಾವೈಕ್ಯದ ಬಗೆಗಿನ ಭ್ರಮೆಯನ್ನು, ಪೊಳ್ಳುತನವನ್ನು ನಂತರದ ಸಂಪಾದಕೀಯದಲ್ಲಿ ಟೀಕಿಸುತ್ತಾರೆ. ಸಮಾನ ಸಿವಿಲ್ ಸಂಹಿತೆಯ ಜಾರಿಯಾಗುವಿಕೆ ಕೇವಲ ಆಕರ್ಷಕ ಘೋಷಣೆಯಿಂದ ಸಾಧ್ಯವಿಲ್ಲ. ಆದರೆ ಆಳುವವರ ದೃಢವಾದ ರಾಜಕೀಯ ಸಂಕಲ್ಪ ಇದಕ್ಕೆ ಬೇಕಾಗಿದೆ. ಸಮಾನ ಸಿವಿಲ್ ಸಂಹಿತೆಯ ಅಗತ್ಯತೆ, ಉಪಯುಕ್ತತೆಯ ಬಗ್ಗೆ ತಿಳಿವು ಮೂಡಿಸುವ ಕಾರ್ಯವನ್ನು **ಬುದ್ಧಿ ಜೀವಿಗಳು, ಪ್ರಗತಿಪರ ಸಂಘಟನೆಗಳು, ಮಹಿಳಾ ಸಂಘಟನೆಗಳು ಮಾಡಬೇಕಿವೆ** ಎಂದು 1995ರ ಮೇ ಸಂಪಾದಕೀಯದಲ್ಲಿ ಬರೆಯುತ್ತಾರೆ.

ಆಗಸ್ಟ್ 2003ರ ಸಂಪಾದಕೀಯದಲ್ಲಿ ಈ ಕೆಳಗಿನ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾರೆ. ರಾಷ್ಟ್ರೀಯ ಏಕತೆಯ ಬಗ್ಗೆ ತಮ್ಮ ಮೊದಲ ಅಭಿಪ್ರಾಯವನ್ನು ಇಲ್ಲಿ ವಿರೋಧಿಸುತ್ತಾರೆ. ಏಕ ರೂಪ ನಾಗರಿಕ ಸಂಹಿತೆಯನ್ನು ತರುವುದರಿಂದ ರಾಷ್ಟ್ರೀಯ ಏಕತೆ ಸಾಧ್ಯ ಎಂದು **ಭ್ರಮಿಸಿರುವ ಸುಪ್ರೀಂಕೋರ್ಟಿನ** ನಿಲುವನ್ನು ಸ್ವಾಗತಿಸಿರುವ ಬಿ.ಜೆ.ಪಿ.ಯು ಇಡೀ ದೇಶವನ್ನು ಹಿಂದೂ ರಾಷ್ಟ್ರ ಮಾಡಿಬಿಡಬಹುದೆಂಬ ಕನಸಿನಲ್ಲಿ ಆನಂದದಿಂದ ಕುಣಿಯುತ್ತಿದೆ.

...ಸಮಾನ ನಾಗರಿಕ ಸಂಹಿತೆಯನ್ನು ತರುವ ಪ್ರಯತ್ನಗಳಲ್ಲಿ ನಾವು **ನ್ಯಾಯಾಲಯಗಳನ್ನು ನೆಚ್ಚಿಕೊಳ್ಳುವುದಕ್ಕಿಂತ ಜನ ಸಾಮಾನ್ಯರ ನಡುವಿನ ಜಾಗೃತಿಯ ಚಳವಳಿಯನ್ನು ಅವಲಂಬಿಸುವುದು ಲೇಸು.**

...ಸಮಾನ ನಾಗರಿಕ ಸಂಹಿತೆಯೆನ್ನುವುದು ತತ್‌ಕ್ಷಣದಲ್ಲಿ ಆಗುವ ಕಾರ್ಯವಲ್ಲ. ಅದಕ್ಕೆ ಹಲವು ವರ್ಷಗಳೇ ಬೇಕಾಗಬಹುದು. ಎಲ್ಲಾ **ಧರ್ಮಗಳ ಪ್ರತಿನಿಧಿಗಳ ವಿಶ್ವಾಸದಿಂದ, ಭಾಗವಹಿಸುವಿಕೆಯಿಂದ ಇಂತಹ ಕರಡು ಮಸೂದೆ ಸಿದ್ಧವಾಗಬೇಕು.**

ಸೆಕ್ಯುಲರ್ ಭಾರತಕ್ಕೆ ಸಮಾನ ಸಿವಿಲ್ ಸಂಹಿತೆ ಅಗತ್ಯವಿದೆ. ಅದರಲ್ಲೂ ವಿಶೇಷವಾಗಿ ಮಹಿಳೆಯರಿಗೆ ಬೇಕಾಗಿದೆ. **ಈ ಸಂಹಿತೆಯ ಜಾರಿಯಷ್ಟರಿಂದಲೇ ರಾಷ್ಟ್ರೀಯ ಏಕತೆ ಸಾಧ್ಯವಾಗಿಬಿಡುತ್ತದೆ ಎಂಬುದು ಒಂದು ಭ್ರಮೆಯಷ್ಟೇ.** ಎನ್ನುವ ನಿಲುವುಗಳನ್ನು ಆಗಸ್ಟ್ 2003ರ ಸಂಪಾದಕೀಯದಲ್ಲಿ ಬರೆಯುತ್ತಾರೆ.

ಜೂನ್ 2005ರ 'ಸುಧಾರಣೆಯತ್ತ ಮನಸ್ಸಿಲ್ಲದ ನಿಖಾನಾಮ' ಸಂಪಾದಕೀಯದಲ್ಲಿ ಸಮಾಜದ ಅರ್ಧಭಾಗವಾದ ಮಹಿಳೆಯರಿಗೆ ಅನ್ವಯಿಸುವಂತಹ ಕಾನೂನನ್ನು ರೂಪಿಸುವಾಗ ಅವರ ಒಳಗೊಳ್ಳುವಿಕೆಯಿಲ್ಲದೇ ಮತ್ತು ಅವರ ಅಭಿಪ್ರಾಯಗಳಿಗೆ ಮನ್ನಣೆ ನೀಡದೇ ನಡೆಸುವ ಯಾವ ಪ್ರಯತ್ನವೂ 'ಸುಧಾರಣೆ'ಯೆನಿಸಿ ಕೊಳ್ಳುವುದಿಲ್ಲ. ಆದ್ದರಿಂದ **ಪ್ರಗತಿಪರ ಮುಸ್ಲಿಂ ಮಹಿಳೆಯರು ತಮಗೆ ಬೇಕಾದಂತಹ ಕಾನೂನನ್ನು ರೂಪಿಸುವ ದಿಕ್ಕಿನತ್ತ ಹೋರಾಟ ನಡೆಸಬೇಕು.** ಇಂತಹ ಹೋರಾಟಕ್ಕೆ ಇಡೀ ಮಹಿಳಾ ಸಮುದಾಯ **ದನಿಗೂಡಿಸಬೇಕು. ಕೈ ಜೋಡಿಸಬೇಕು** (ವಾಕ್ಯಗಳ ಮೇಲಿನ ಒತ್ತು ನನ್ನದು) ಆಗಸ್ಟ್ 2003ರ ಈ ಸಂಪಾದಕೀಯದಲ್ಲಿ ಮುಸ್ಲಿಂ ಸಮುದಾಯವೇ ಈ ಪರವಾಗಿ ಹೋರಾಟ ನಡೆಸಬೇಕಾದ ಅಗತ್ಯ ಕುರಿತು ಹೇಳುತ್ತಾರೆ.

ಭಿನ್ನ ಭಿನ್ನ ವರ್ಷಗಳಲ್ಲಿ ಪ್ರಸ್ತಾಪಿಸಿದ 'ಏಕ ರೂಪ ನಾಗರಿಕ ಸಂಹಿತೆ'ಯ ಬಗೆಗಿನ ಸಂಪಾದಕೀಯಗಳಲ್ಲಿ ಹೋರಾಟದ ಹಾದಿಗಳನ್ನು ಗುರುತಿಸುತ್ತಾ, ಭಾವೈಕ್ಯತೆಯ ಬಗೆಗಿನ ಭ್ರಮೆಗಳನ್ನು ಕಳಚಿಕೊಳ್ಳುತ್ತಾ, ಹಿಂದುತ್ವದ ಒಳಸುಳಿಗಳನ್ನು ಗುರುತಿಸುತ್ತಾ, ಬಹುಮುಖೀ ಸಂಸ್ಕೃತಿಯ ಮೇಲಿನ ದಾಳಿಯ ವಿರೋಧವನ್ನು ಗುರುತಿಸುವ ರೀತಿಯಲ್ಲಿ ವಿಶ್ಲೇಷಣೆ ವ್ಯಾಪಕವಾಗುತ್ತಾ ಹೋಗುವುದನ್ನು ಗಮನಿಸಬಹುದಾಗಿದೆ. ಹಾಗೆಯೇ ವಿವಿಧ ಹಂತದ ವಿಶ್ಲೇಷಣೆಯಲ್ಲಿ ಗಾಯತ್ರಿಯವರು ಬೆಳೆಯುತ್ತಾ ಹೋಗುವುದನ್ನೂ ಕೂಡಾ ನಾವು ಕಾಣಬಹುದಾಗಿದೆ. ಬಹುಮುಖಿ ಸಂಸ್ಕೃತಿಯ ಬಗ್ಗೆ ಒತ್ತುನೀಡುವ ಸ್ವಾಯತ್ತ ಮಹಿಳಾಚಳವಳಿ ಏಕರೂಪ ನಾಗರಿಕ ಸಂಹಿತೆಯ ವಿಷಯದಲ್ಲಿ ಆಯ್ಕೆಗೆ ಬದ್ದಿಕೊಟ್ಟ ಮಾತನಾಡಿದೆ. ಸುಧಾರಿತ ವೈಯಕ್ತಿಕ ಕಾನೂನು ಹಾಗೂ ಏಕರೂಪ ಸಂಹಿತೆಯ ಕಾನೂನುಗಳಲ್ಲಿ – ಎಲ್ಲಿ ಮುಸ್ಲಿಂ ಮಹಿಳೆಗೆ ನ್ಯಾಯ ದೊರಕಬಹುದೋ ಅಲ್ಲಿ ನ್ಯಾಯ ಪಡೆಯುವ ಆಯ್ಕೆ ಹಕ್ಕು ಆಕೆಯದಾಗಿರಬೇಕು. ಸಮುದಾಯದಲ್ಲಿಯೇ ಬದುಕಿ ಉಳಿಯಲಿಚ್ಛಿಸುವ ಮಹಿಳೆಯರಿಗೆ ಕಾನೂನಿನ ಆಯ್ಕೆಯನ್ನು ಕೊನೆಯದಾಗಿ ಅವರಿಗೇ ಬಿಡಬೇಕಾಗುತ್ತದೆ. ಸ್ವಾಯತ್ತ ಮಹಿಳಾ ಚಳವಳಿಯು ಪಕ್ಷ ರಾಜಕಾರಣವನ್ನು ಒಪ್ಪುವುದಿಲ್ಲ, ಪುರುಷಾಧಿಕಾರದ ನೆಲೆಗೇ ಇವರು ಪ್ರಾಶಸ್ತ್ಯ ನೀಡುತ್ತಾರೆ ಎಂದು ಸ್ವಾಯತ್ತ ಚಳವಳಿಯ ಅಸ್ತಿತ್ವದ ಮಹತ್ವವನ್ನೇ ನಿರಾಕರಿಸುವ ಗಾಯತ್ರಿಯವರು ಅನೇಕ ವೈರುಧ್ಯಮಯವಾದ ನಿಲುವುಗಳನ್ನೂ ಸಂಪಾದಕೀಯಗಳಲ್ಲಿ ತೆಗೆದುಕೊಂಡಿರುವುದನ್ನು ನಾವು ಈ ಉದಾಹರಣೆಗಳಲ್ಲಿ ಗಮನಿಸಬಹುದಾಗಿದೆ. ಸ್ವಾಯತ್ತ ಚಳವಳಿ ಪಿತೃ ಪ್ರಧಾನ ರಚನೆಯನ್ನು ಮಾತ್ರ ವಿಶ್ಲೇಷಣೆಯ ತಳಹದಿಯನ್ನಾಗಿಸುತ್ತದೆ ಎಂಬ ಪೂರ್ವಗ್ರಹೀತ ನಿಲುವನ್ನು ಪ್ರತಿಪಾದಿಸುವ ಇವರ ವಿಶ್ಲೇಷಣೆ ಅಲ್ಲಲ್ಲಿ, ಅನೇಕ ಸಂಪಾದಕೀಯಗಳಲ್ಲಿ ಪಿತೃಪ್ರಧಾನ ರಚನೆಯನ್ನು ಟೀಕಿಸುವತ್ತಲೇ ವಾಲಿರುವುದನ್ನೂ ಕೂಡಾ ಗಮನಿಸಬಹುದಾಗಿದೆ.

ಮಹಿಳಾ ಮೀಸಲಾತಿ ಇಂದಿಗೂ ನೆನೆಗುದಿಗೆ ಬಿದ್ದಿರುವುದನ್ನೂ ಸಹ ಲೇಖಕಿ ಹಲವಾರು ಬಾರಿ ಚರ್ಚಿಸುತ್ತಾರೆ. ಆಂಧ್ರಪ್ರದೇಶದಲ್ಲಿ

ನಡೆದ ಎಂ.ಎಲ್.ಎ, ಎಂ.ಪಿ.ಗಳ ರಾಷ್ಟ್ರೀಯ ಸಮಾವೇಶದಲ್ಲಿ ಮಹಿಳಾ ಮೀಸಲಾತಿ ಎನ್ನದೇ ಮಹಿಳಾ ಪ್ರಾತಿನಿಧ್ಯ ಎಂದಿರಬೇಕು ಎಂದು ಒತ್ತಾಯಿಸಿದುದರ ಮೇಲೆ ಬೆಳಕು ಚೆಲ್ಲುತ್ತಾರೆ. ಸತಿ ಪದ್ಧತಿ ಇಂದಿಗೂ ಜಾರಿಯಲ್ಲಿರುವ ರೀತಿಯಲ್ಲಿ ಅಡಗಿರುವ ರಾಜಕೀಯ ಹುನ್ನಾರಗಳನ್ನು ಬಯಲಿಗೆಳೆಯುತ್ತಾರೆ. 'ಅಧಿಕಾರ' ಪುರುಷಸಮಾಜದ ಮೌಲ್ಯ ಆಗಿದೆ ಎಂಬುದನ್ನು ಹಲವಾರು ಬಾರಿ ಪ್ರಸ್ತಾಪಿಸುತ್ತಾರೆ. ಸ್ವಾತಂತ್ರ್ಯಾಚರಣೆ, ಸುವರ್ಣ ಮಹೋತ್ಸವಗಳ ಹಿನ್ನೆಲೆಯಲ್ಲಿ ಈಗಿರುವ ಮಹಿಳೆಯರ ಸ್ವಾತಂತ್ರ್ಯವನ್ನು ಒರೆಗಿಡುತ್ತಾರೆ.

ಪಾಶ್ಚಾತ್ಯ ಮಹಿಳಾ ಚಳವಳಿಗಾರರು ಗೃಹಕೃತ್ಯದ ಎಲ್ಲಾ ಕೆಲಸಗಳಿಗೆ ಕೂಲಿ ಕೊಡಿಸುತ್ತೇವೆಂದು **ಮಾನವೀಯ ಮೌಲ್ಯಗಳಿಗೆ ಕೈ ಹಾಕದಿರಲಿ** ಎಂಬ ಎಚ್ಚರಿಕೆಯನ್ನು 1985 ಸೆಪ್ಟೆಂಬರ್ ಸಂಪಾದಕೀಯದಲ್ಲಿ ಕೊಡುವ ಇವರು, ಸೆಪ್ಟೆಂಬರ್ 1997ರ ಸಂಪಾದಕೀಯದಲ್ಲಿ ರಾಜ್ಯಯಂತ್ರವು ವರ್ಗಶೋಷಣೆಯ ಸಾಧನವೆಂದರೆ, ಕುಟುಂಬವು ಸ್ತ್ರೀಯನ್ನು ಶೋಷಿಸಲು ಪುರುಷ ಸಾಧನವಾಯಿತು. ಬೆಲೆಯಿಲ್ಲದ ದುಡಿಮೆಯಿಂದ ಕುಟುಂಬವನ್ನು ಪೋಷಿಸಿ, ಪಾಲಿಸುವ ಹೆಣ್ಣು, ತನ್ನ ವ್ಯಕ್ತಿತ್ವದ ವಿಕಾಸಕ್ಕೆ, ಸಮರ್ಥನೆಗೆ, ಸ್ವಂತಿಕೆಯ ಶೋಧಕ್ಕೆ, ತನ್ನ **'ದುಡಿಮೆ'ಗೆ ಕುಟುಂಬದಾಚೆಗಿನ ಸಾಮಾಜಿಕ ಮೌಲ್ಯವನ್ನು ಪಡೆಯಲೇಬೇಕಾಗುತ್ತದೆ** ಎನ್ನುತ್ತಾರೆ. ಹೀಗೆ ಕೆಲವೊಮ್ಮೆ ವೈರುಧ್ಯಮಯ ಚಿಂತನೆಗಳನ್ನು ಗಮನಿಸಬಹುದಾಗಿದೆ.

ರಾಷ್ಟ್ರೀಯ ಆಂದೋಳನಗಳಲ್ಲಿ ಮಹಿಳೆಯರ ಭಾಗವಹಿಸುವಿಕೆಯಿಂದಾಗಿ ಪುರುಷರ ದಬ್ಬಾಳಿಕೆಯನ್ನು ಪ್ರತಿಭಟಿಸುವ ಅವರ ಧ್ವನಿ ಕ್ಷೀಣವಾಗಿಸುತ್ತದೆ ಎಂಬ ಸ್ತ್ರೀತ್ವವಾದಿಗಳ ವಾದ ಹುರುಳಿಲ್ಲದ್ದು ಎಂದು 1986ರ ಜುಲೈನಲ್ಲಿ ಹೇಳುವ ಇವರು, ಸೆಪ್ಟೆಂಬರ್ 1997ರ ಸಂಪಾದಕೀಯದಲ್ಲಿ 'ಪುರುಷ ನೇತೃತ್ವದ ಸಾಮಾಜಿಕ ಚಳವಳಿಗಳಲ್ಲಿ ಮಹಿಳೆಯರಿಗಿರುವ ಆದ್ಯತೆ ಮತ್ತು ಪ್ರಾಮುಖ್ಯತೆಯ ಬಗ್ಗೆ ಸಂಶಯಗಳು ಹಲವಾರಿವೆ. ನಮ್ಮ ಮಹಿಳೆಯರ ಅನುಭವಗಳು ಚಿಂತನೆಗಳು ನಿಷ್ಕಾಮವಾಗಿರುವ ಸಂದರ್ಭಗಳೇ ಸ್ವಾತಂತ್ರ್ಯ ಚಳವಳಿಗಳಲ್ಲಿ ಹೆಚ್ಚಾಗಿದ್ದು, ಯಾರೂ ಪುರುಷ ವಿರೋಧಿ ಧೋರಣೆಯನ್ನು ವ್ಯಕ್ತಪಡಿಸದಿರುವುದು ಗಮನಿಸಬೇಕಾದ ಅಂಶ' ಎನ್ನುತ್ತಾರೆ.

...ಮಹಿಳೆಯ ಸಂಘರ್ಷವನ್ನು ಸ್ವಾತಂತ್ರ್ಯದ ಆಂದೋಲನದೊಂದಿಗೆ ಸಮೀಕರಿಸಿದ ಗಾಂಧಿ ಮಹಿಳೆಯರಿಗೆ ಪ್ರತ್ಯೇಕತಾವಾದಿ ಚಳವಳಿಯನ್ನು ನಿರಾಕರಿಸಿದರು. ಆದರೂ ಮುಂದಿನ ಮಹಿಳಾ ಚಳವಳಿಗೆ ಭದ್ರವಾದ ಬುನಾದಿಯನ್ನು ಸ್ವಾತಂತ್ರ್ಯ ಚಳವಳಿ ಬಿತ್ತಿತೆಂಬುದರಲ್ಲಿ ಸಂಶಯವಿಲ್ಲ ಎಂದು ಬರೆಯುತ್ತಾರೆ.

ಮೇ, 1993ರ ಸಂಪಾದಕೀಯದಲ್ಲಿ ಕುಟುಂಬದಲ್ಲಿಯೆ ತನ್ನ ದಾಸ್ಯದ ಬೇರುಗಳು ಆಳುವ 'ವರ್ಗದ ಸಮಾಜದಲ್ಲಿ' ಎಂಬುದನ್ನು ಮನವರಿಕೆ ಮಾಡಿಕೊಂಡ ಹೆಣ್ಣು ಕುಟುಂಬದ ಸದಸ್ಯೆಯಾಗಿ, ಕಾರ್ಖಾನೆಯ ಕಾರ್ಮಿಕಳಾಗಿ ಒಟ್ಟು ಸಮಾಜದ ಬದಲಾವಣೆಗಾಗಿ ಹೋರಾಡಬಲ್ಲಳು ಎನ್ನುತ್ತಾರೆ. ನವೆಂಬರ್ 1994ರ ಸಂಪಾದಕೀಯದಲ್ಲಿ ಹೆಣ್ಣಿನ ಕುಟುಂಬದ ಕಲ್ಪನೆ ಇಂದು ಬದಲಾಗಬೇಕಾದ ಅವಶ್ಯಕತೆಯಿದೆ. ಇದಕ್ಕೆ ಆಸ್ತಿಯ ಹಕ್ಕನ್ನು ವಿತರಿಸುವ ಕ್ರಮದಲ್ಲೂ ಮೂಲಭೂತ ಬದಲಾವಣೆ ತರಬೇಕು. ಅವಿವಾಹಿತ ಹೆಣ್ಣು, ವಿಚ್ಛೇದಿತ ಹೆಣ್ಣು, ವಿಧವೆ – ಈ ಎಲ್ಲರಿಗೂ ತಮ್ಮದೊಂದು ಕುಟುಂಬ ಇದೆಯೆಂಬ ಭಾವ ಮೂಡಬೇಕಾದರೆ 'ವಿವಾಹ' ಸಂಸ್ಥೆಯ ಔಚಿತ್ಯದ ಪುನರ್‌ವಿಮರ್ಶೆ ಮಾಡಬೇಕಿದೆ ಎನ್ನುತ್ತಾರೆ.

ಕಸಿ ಶಿಶು, ಕ್ಲೋನಿಂಗ್ ರಾಜಕೀಯದಲ್ಲಿ ಬಾಡಿಗೆ ತಾಯಂದಿರನ್ನು ದೇಹ, ಗರ್ಭದ ಹಂತಕ್ಕೆ ಇಳಿಸಿ ನೋಡುವುದು ಯಾವ ಪುರುಷಾರ್ಥಕ್ಕೆ ಎಂದು 2003ರ ಜನವರಿಯ ಸಂಪಾದಕೀಯದಲ್ಲಿ ಬರೆಯುತ್ತಾರೆ.

ಏಕರೂಪ ಸೈದ್ಧಾಂತಿಕ ಚೌಕಟ್ಟು, ಹೋರಾಟದ ವಿಧಾನ ಇಲ್ಲದಿರುವುದೇ ಮಹಿಳಾ ಚಳವಳಿಯ ಸೋಲಿಗೆ ಕಾರಣ ಎನ್ನುವ ಎನ್. ಗಾಯತ್ರಿಯವರು ಸ್ವಾಯತ್ತ ಮಹಿಳಾ ಚಳವಳಿ ಪಿತೃಪ್ರಧಾನ ಪುರುಷಾಧಿಪತ್ಯದ ವಿರುದ್ಧ ಮಾತ್ರವೇ ಹೋರಾಡುತ್ತದೆ ಎಂದು ಟೀಕಿಸುತ್ತಾರೆ. ಬೀಜಿಂಗ್‌ನಲ್ಲಿ ಪಕ್ಷ ರಾಜಕೀಯ ಸೈದ್ಧಾಂತಿಕತೆ ನಂಬಿದ ಚಳವಳಿ–ಮಹಿಳಾಭಾಷೆ, ಘೋಷಣೆ ಸರಿಯಾದ ರೀತಿಯಲ್ಲಿ ಸರ್ಕಾರಕ್ಕೆ ಮನವರಿಕೆ ಮಾಡಿಕೊಡುವ, ಸರ್ಕಾರದ ನಿಷ್ಕ್ರಿಯತೆ ಬಯಲು ಮಾಡುವ ಹಾಗೂ ಅನುದಾನ ಪಡೆಯುವ ಮಹಿಳಾ ಸಂಘಟನೆಗಳ ಸ್ವರೂಪವನ್ನು ಖಂಡಿಸುವುದನ್ನು ಉದ್ದೇಶವಾಗಿ ಹೊಂದಿತ್ತು ಎನ್ನುತ್ತಾರೆ.

ಅಧಿಕಾರ ಶಕ್ತಿ ರಾಜಕೀಯಕ್ಕೆ ಸ್ವಾಯತ್ತತೆಯ ಹೋರಾಟದ ಕಲ್ಪನೆ ಎಂದಿಗೂ ಪರ್ಯಾಯವಾಗಲಾರದು, ಆದ್ದರಿಂದಲೇ ಮಹಿಳೆಯರು ಹೆಚ್ಚು ಹೆಚ್ಚು ರಾಜಕೀಯ ಪ್ರಕ್ರಿಯೆಗೆ ಒಳಗಾಗಬೇಕು, ಮತ್ತು ಮಹಿಳಾ ಪ್ರಶ್ನೆ ರಾಜಕೀಯ ಪ್ರಶ್ನೆಯಾಗಬೇಕೆಂದು 1996ರ ಮಾರ್ಚ್ ಸಂಪಾದಕೀಯದಲ್ಲಿ ಬರೆಯುತ್ತಾರೆ.

ಫೆಬ್ರವರಿ 2005ರ ಸಂಪಾದಕೀಯದಲ್ಲಿ **ಪುರುಷ ಪ್ರಧಾನ ಸಮಾಜದ ಢೋಂಗಿಯನ್ನು ಮೊದಲು ಬಯಲಿಗೆಳೆಯಬೇಕೆಂದೂ** ಹಾಗೆಯೇ ಪಕ್ಷ ರಾಜಕಾರಣದಲ್ಲಿ ಲಿಂಗಕ್ಕೆ ನ್ಯಾಯ ಸಿಗದೇ ಹೋಗಬಹುದಾದ ಅನಾಹುತವೂ ಇರುತ್ತದೆ ಎನ್ನುತ್ತಾರೆ.

ಈ ಎಲ್ಲಾ ವೈರುಧ್ಯಗಳ ಮಿತಿಗಳ ನಡುವೆಯೂ ಗಾಯತ್ರಿಯವರ ಸಂಪಾದಕೀಯಗಳನ್ನು 1ರಿಂದ 109ರ ವರೆಗೆ ಒಂದು ಸುತ್ತು ಸುತ್ತಿ ಬಂದಾಗ ಮಹಿಳಾ ಪ್ರಶ್ನೆಗಳ ಹಿಂದಿರುವ ರಾಜಕೀಯ ಹುನ್ನಾರಗಳನ್ನು ಅವರದೇ ವೈಚಾರಿಕ ಚೌಕಟ್ಟಿನಲ್ಲಿ ಹಿಡಿದಿಟ್ಟಿರುವುದು ಸ್ಪಷ್ಟವಾಗುತ್ತದೆ. ಆಯಾ ಸಂದರ್ಭದ ಪ್ರಕರಣಗಳಿಗೆ, ರಾಜಕೀಯ ವಿದ್ಯಮಾನಗಳಿಗೆ ಇಡಿಯಾಗಿ ಮಹಿಳಾ ಚಳವಳಿಯ ಒಂದು ವಿಮರ್ಶಾತ್ಮಕ ನೋಟವನ್ನು ಇವರ ಸಂಪಾದಕೀಯಗಳು ಒದಗಿಸುತ್ತವೆ. ಒಟ್ಟಾಗಿ ಹೇಳಬೇಕೆಂದರೆ ಎರಡು ದಶಕಗಳ ರಾಜಕೀಯ, ಸಾಂಸ್ಕೃತಿಕ, ಸಾಮಾಜಿಕ ಆಯಾಮಗಳಿಗೆ ಹಿಡಿದ ಅವರದೇ ಮಹಿಳಾ ವೈಚಾರಿಕ ದೃಷ್ಟಿಕೋನದ ಕನ್ನಡಿಯಾಗಿ ಇವರ ಸಂಪಾದಕೀಯಗಳು 'ಸಂಚಲ'ದಲ್ಲಿ ಬಿಂಬಿಸಿವೆ ಎಂದು ಹೇಳಬಹುದಾಗಿದೆ.

●



# ರಂಗಭೂಮಿಗೆ ಸ್ತ್ರೀ ಪ್ರವೇಶ

## ಅಸ್ತಿತ್ವ-ಬದುಕು-ಸಾಧನೆ-ಅಭಿವ್ಯಕ್ತಿ

■ ಎನ್. ಮಂಗಳಾ

ರಂಗಭೂಮಿಗೆ ಸ್ತ್ರೀ ಪ್ರವೇಶ ಬಹಳ ತಡವಾಗಿ ಆಗಿದೆ. ಹೇಳಿಕೇಳಿ ರಂಗಭೂಮಿ ಅಸ್ಪೃಶ್ಯ ಕಲೆ ಎಂದೇ ಹೆಸರಾದದ್ದು. ಇನ್ನು ಸಮಾಜದಲ್ಲಿ ಸ್ತ್ರೀ ಎಂದರೆ ಎರಡನೇ ಪ್ರಜೆಯೆಂದೇ ಪರಿಗಣಿಸಲ್ಪಟ್ಟವಳು. ಹೀಗೆ ಶೂದ್ರರ ಕಲೆ ಎಂದು ರಂಗಭೂಮಿಗೆ ಹೆಸರು ಕೊಡುತ್ತಲೇ ಅಲ್ಲಿ ಕೆಲಸ ಮಾಡುವ ಹೆಂಗಸರನ್ನೆಲ್ಲ ಸೂಳೆಯರೆಂದೇ ಪರಿಗಣಿಸುತ್ತಿದ್ದ ಕಾಲ ಇತ್ತು. ಹೀಗಿರುವಾಗ ರಂಗಭೂಮಿಗೆ ಸ್ತ್ರೀಯರು ಬರುವುದಾದರೂ ಹೇಗೆ? ಹಾಗಾಗಿ ರಂಗಭೂಮಿಯಲ್ಲಿ ಕೆಲಸ ಮಾಡಬೇಕಾದ ಸ್ತ್ರೀ ಪಾತ್ರಗಳ ಪಾಸ್‌ಗಳೆಲ್ಲ ಪುರುಷರ ಪಾಲಾಗಿದ್ದವು ಎಂದು ಹೇಳಬೇಕೋ, ಅಥವಾ ಪಾಸ್ ತೆಗೆದುಕೊಳ್ಳಬೇಕಾದ ಸ್ತ್ರೀಯರು ಅತ್ತ ಕಡೆ ಸುಳಿಯದೆ ಉಳಿದುಬಿಟ್ಟಿದ್ದರು ಎಂದು ತಿಳಿಯಬೇಕೋ ಅಥವಾ ಸ್ತ್ರೀಯರು ಅಲ್ಲಿಗೆ ಬಾರದ ಹಾಗೆ ವ್ಯವಸ್ಥೆ ಸೃಷ್ಟಿಯಾಗಿತ್ತೋ ಅಥವಾ ಅಲ್ಲಿಗೆ ಅವರು ಬಾರದ ಹಾಗೆ ಮನಸ್ಸುಗಳನ್ನು ಸಿದ್ಧಪಡಿಸಿದ ಆವರಣ ಅಲ್ಲಿತ್ತು ಎನ್ನಬೇಕೋ ಎಂಬುದನ್ನು ನಾವು ಇವತ್ತು ವಿಶ್ಲೇಷಿಸಿ, ವಿಮರ್ಶಿಸಿ ಗ್ರಹಿಸಬೇಕಾಗಿದೆ.

ಮೊದಲಿಗೆ ರಂಗಭೂಮಿಯಲ್ಲಿ ಸ್ತ್ರೀಯರ ಇರುವಿಕೆಗೆ ಆವರಣವೆಂಬುದೇ ಇರಲಿಲ್ಲ. ಸ್ತ್ರೀಯರು ರಂಗಭೂಮಿಗೆ ಪ್ರವೇಶ ಮಾಡುವ ವಿಚಾರದಲ್ಲಿ ಪುರುಷ ಮನಸ್ಸುಗಳು ಬಹುಕಾಲದವರೆಗೆ ಎಚ್ಚರದಿಂದ ತಡೆ ಹಿಡಿದಿಟ್ಟಿವೆ. ಗಂಡಸರೇ ಸ್ತ್ರೀಪಾತ್ರಗಳ ವೇಷಧಾರಿಗಳಾಗಿ ಗಂಡು ಮನಸ್ಸಿನಿಂದಲೇ ಹೆಣ್ಣುಗಳನ್ನು ಹೆಣ್ಣುಗಳ ಒಳಮನಸ್ಸನ್ನು ತೆರೆದಿಡುವ ಪ್ರಯತ್ನ ಮಾಡಿದ್ದಾರೆ. ಹೆಣ್ಣಿನ ಎಲ್ಲ ಬಾಹ್ಯ ಅಭಿವ್ಯಕ್ತಿಗಳನ್ನು ಚೆನ್ನಾಗಿ ಕರಗತ ಮಾಡಿಕೊಂಡು 'ನೋಡಿದರೆ ಹೆಣ್ಣುಗಳೇ ನಾಚಿಬಿಡುವಂಥ ನೈಜ ಹೆಣ್ಣಿನ ಚಿತ್ರಣವನ್ನು ಕೊಟ್ಟಿದ್ದಾರೆ' ಎಂಬ ಬಹಳಷ್ಟು ವಿಮರ್ಶೆಗಳಿಗೆ ಪಾತ್ರರಾಗಿದ್ದಾರೆ. ಆದರೆ ಬಾಹ್ಯ ಅಭಿವ್ಯಕ್ತಿ ಪಾತ್ರವೊಂದರ ಸಂಪೂರ್ಣ ಅಭಿವ್ಯಕ್ತಿ ಹೇಗಾದೀತು? ಅದು ಹೆಣ್ಣೊಬ್ಬಳ ಅಂತರಂಗದ ಸೂಕ್ಷ್ಮ ಭಾವಗಳನ್ನು, ಸುಪ್ತ ಮನಸ್ಸಿನ ಆಶಯ, ಆಕಾಂಕ್ಷೆಗಳನ್ನೂ ತೆರೆದಿಡುವ ಪ್ರಾಮಾಣಿಕ ಅಭಿವ್ಯಕ್ತಿ ಆಗುವುದಿಲ್ಲ. ಹೆಣ್ಣು ಗಂಡಿನ ಪಾತ್ರವನ್ನು ಗಂಡು ಹೆಣ್ಣಿನ ಪಾತ್ರವನ್ನೂ ಅಭಿನಯಿಸುವುದು ನಟನಟಿಯರ ಸಾಧನೆಯ ಪಯಣದಲ್ಲಿ ನಡೆಸುವ ಪ್ರಯೋಗಗಳಾಗುತ್ತವೆಯೇ ಹೊರತು ಅಂತರಂಗದ ಸತ್ಯವಾಗುವುದಿಲ್ಲ. ಪ್ರೇಕ್ಷಕರ ದೃಷ್ಟಿಯಿಂದ ಅದ್ಭುತವಾದ ಯಶಸ್ಸನ್ನು ಗಳಿಸಿ ಜನಪ್ರಿಯರೆನಿಸಿಕೊಂಡಾಕ್ಷಣ ಅವು ಅಂತರ್ಯದ ಸತ್ಯಗಳಾಗಬೇಕಿಲ್ಲ. ಈ ಸತ್ಯ ಅಭಿವ್ಯಕ್ತಿಗೆ ಸುಲಭವಾಗಿ ದಕ್ಕುವಂಥದ್ದೂ ಅಲ್ಲ. ನಿರಂತರ ಸಾಧನೆಯ ಹಾದಿಯಲ್ಲಿ ಎಂದಾದರೊಮ್ಮೆಮ್ಮೆ ಝಲಕು ಹುಟ್ಟಿಸುವಂತೆ ಕಂಡು ಕಾಣೆಯಾಗಿ ಅನುಭವಕ್ಕೆ ಮಾತ್ರ ದಕ್ಕುವಂಥದ್ದು. ಆ ಝಲಕನ್ನು ಬೆಂಬತ್ತಿ ಸರ್ವಕಾಲದಲ್ಲೂ ಆ ಅನುಭವವನ್ನು ದಕ್ಕಿಸಿಕೊಳ್ಳಲು ಕಠಿಣ ಹಾದಿಯ ಪ್ರಯಾಣದ ತಾಲೀಮು ಮಾತ್ರ ಜೀವನದುದ್ದಕ್ಕೂ ನಡೆಯುತ್ತಲೇ ಇರಬೇಕಾದ್ದು. ಇದು ನಟನಟಿಯರ ಜವಾಬ್ದಾರಿ. ಪ್ರೇಕ್ಷಕಾಂಗಣದಲ್ಲಿ ರಸೋತ್ಪತ್ತಿಯಾದ ಮಾತ್ರಕ್ಕೆ ರಂಗದ ಮೇಲೆ ಅಭಿವ್ಯಕ್ತಗೊಂಡ ಭಾವ ಸಂಪೂರ್ಣ ಅಭಿವ್ಯಕ್ತಿಯಾಗಿರಲೇಬೇಕಿಲ್ಲ. ಭಾವದ ತೀವ್ರತೆ ಯಾವಾಗಲೂ ಎಲ್ಲ ಪ್ರದರ್ಶನಗಳಲ್ಲೂ ಒಂದೇ ತೆರನಾಗಿರುವುದಿಲ್ಲ. ಆದರೆ ಸಾಮಾನ್ಯ ರಸೋತ್ಪತ್ತಿಗೆ ಭಂಗ ಬಾರದಂತೆ ಪ್ರದರ್ಶನವನ್ನು ತೂಗಿಸಿಕೊಂಡು ಹೋಗುವಂತೆ ನಟನಟಿಯರು ನುರಿತಿರುತ್ತಾರಾದ್ದರಿಂದ ಭಾವ ತೀವ್ರತೆಯಲ್ಲಿನ, ಅಭಿವ್ಯಕ್ತಿಯಲ್ಲಿನ ವ್ಯತ್ಯಾಸಗಳು ಢಾಳಾಗಿ ಗೋಚರಿಸಲ್ಪಡುವುದಿಲ್ಲ. ಇಂಥ ಸೂಕ್ಷ್ಮ ಎನಿಸುವ ಈ ಅಭಿವ್ಯಕ್ತಿ ಕ್ರಿಯೆ, ಸ್ತ್ರೀ ರಂಗಾಭಿವ್ಯಕ್ತಿ ಬಹಳಷ್ಟು ಕಾಲದವರೆಗೆ ಪುರುಷರಿಂದಲೇ ನಡೆಯಿತು ಎಂಬುದು ಈಗ ಇತಿಹಾಸ. ಅದನ್ನು ಜನ ಚಪ್ಪರಿಸುತ್ತಲೇ ಆಸ್ವಾದಿಸಿದರು ಎಂಬುದೂ ಸತ್ಯ. ಅಂತಹ ಒಪ್ಪಿಗೆಯ ಭಾವ ಸೃಷ್ಟಿಯಾಗಲು ಬೇಕಾದಂತಹ ಸಿದ್ಧತೆ, ಸಂದರ್ಭ ಮತ್ತು ವ್ಯವಸ್ಥೆ ಪುರುಷರಿಂದಲೇ ಸಿದ್ಧವಾಗಿತ್ತು ಎಂಬುದೂ ಅಷ್ಟೇ ಸತ್ಯ.

ಉತ್ತರ ಕರ್ನಾಟಕದ ಜಾನಪದ ಕಲಾ ಪ್ರಕಾರಗಳಲ್ಲಿ ಸ್ತ್ರೀಯರ ಪ್ರವೇಶವಿದ್ದ ಕಾರಣಕ್ಕೋ ಏನೋ ಉತ್ತರ ಕರ್ನಾಟಕದ ರಂಗಭೂಮಿಯಲ್ಲಿ ಸ್ತ್ರೀಯರನ್ನು ಸ್ತ್ರೀಪಾತ್ರಗಳಿಗೆ ಆರಿಸುವ ಯೋಚನೆಯು ಆಗೊಮ್ಮೆ ಈಗೊಮ್ಮೆ ಬಂದು ಹೋಗುತ್ತಿತ್ತಾದರೂ ಹಳೇ ಮೈಸೂರು ಪ್ರಾಂತ್ಯದ ಕಡೆಗಳಲ್ಲಿ ಬಹಳ ಕಟ್ಟುನಿಟ್ಟಾಗಿ ಸ್ತ್ರೀ ಪಾತ್ರಗಳನ್ನು ಪುರುಷರೇ ಅಭಿನಯಿಸುತ್ತಿದ್ದರು. ಹೆಂಗಸರು ಅಭಿನಯಿಸುವ ನಾಟಕಗಳನ್ನು ಹೊಂದಿದ ಕಂಪೆನಿಗಳು ಅರಮನೆಯಲ್ಲಿ ಪ್ರದರ್ಶಿಸುವ ಅವಕಾಶದಿಂದ ವಂಚಿತವಾಗಬೇಕಿತ್ತು. ಗುಬ್ಬಿ ಕಂಪನಿ ಹಾಗೂ ಉ.ಕರ್ನಾಟಕದ ಇತರೆ ಕಂಪನಿಗಳಲ್ಲಿ ಅಪರೂಪವಾಗಿ ಸ್ತ್ರೀಯರು ಸ್ತ್ರೀಪಾತ್ರಗಳನ್ನು ಅಭಿನಯಿಸುತ್ತಿದ್ದರಾದರೂ, ವರದಾಚಾರ್ಯರು ತಮ್ಮ ರತ್ನಾವಲೀ ಥಿಯೇಟ್ರಿಕಲ್ ಕಂಪನಿಯಲ್ಲಿ ತಮ್ಮ ನಾಟಕ ಜೀವನದ ಕೊನೆಯವರೆಗೂ ಸ್ತ್ರೀಯರನ್ನು ತಮ್ಮ ಕಂಪನಿಗೆ ಸೇರಿಸಿಕೊಳ್ಳಲಿಲ್ಲ. ಜೆ.ಬಿ.ಮಲ್ಲಾರಾಧ್ಯರು "ಉತ್ತಮ ವಂಶೀಯರೂ, ವಿದ್ಯಾವಂತರೂ, ಸುಸಂಸ್ಕೃತರೂ ಆದ ಮಹಿಳೆಯರನ್ನು

ಸೇರಿಸಿಕೊಂಡರೆ ವರದಾಚಾರ್ಯರು ರಂಗಭೂಮಿಯ ಇತಿಹಾಸದಲ್ಲಿ ಕ್ರಾಂತಿಯನ್ನೇ ಸಾಧಿಸಬಹುದು" ಎಂದು ಹೇಳಿದ ಮಾತಿಗೆ, ಆಚಾರ್ಯರು "ಅಂಥವರು ಯಾರಾದರೂ ಬರುವವರಾದರೆ ಅವರಿಗೆ ನನ್ನ ಹೃತ್ಪೂರ್ವಕವಾದ ಸ್ವಾಗತವಿದ್ದೇ ಇದೆ" ಎಂದು ಉತ್ತರಿಸಿದ ಪ್ರಸ್ತಾಪವಿದೆ.[1]

ಈ ಮೇಲಿನ ಮಾತುಗಳನ್ನು ಗಮನಿಸಿದಾಗ ವರದಾಚಾರ್ಯರಿಗೆ ವಿದ್ಯಾವಂತ, ಸುಶಿಕ್ಷಿತ, ಉತ್ತಮವಂಶದ ಸ್ತ್ರೀಯರ ಬಗ್ಗೆ ನಂಬಿಕೆ ಮತ್ತು ಗೌರವಾದರಗಳು ಇದ್ದವೆಂದು ತಿಳಿಯಬಹುದಾದರೂ, ಉತ್ತಮ ವಂಶಸ್ಥರಲ್ಲದ, ಅವಿದ್ಯಾವಂತ ಹೆಣ್ಣುಮಕ್ಕಳನ್ನು ಅಸ್ಪೃಶ್ಯರಂತೆ ಕಾಣುವ ಧೋರಣೆಯಿತ್ತೆಂಬುದು ಸ್ಪಷ್ಟವಾಗುತ್ತದೆ. ಮತ್ತು ಈ ಧೋರಣೆ ಅಮಾನವೀಯ ಮತ್ತು ಜೀವವಿರೋಧಿ ಧೋರಣೆ ಎಂಬುದನ್ನು ಇವತ್ತಿನ ಮನಸ್ಸುಗಳು ಗ್ರಹಿಸುತ್ತವೆ. ಆಗ ವಿದ್ಯಾವಂತ, ಉತ್ತಮ ವಂಶದ ಹೆಂಗಸರು ಅಂದು ರಂಗಭೂಮಿಯ ಕಡೆ ತಲೆ ಇಟ್ಟೂ ಮಲಗು ತ್ತಿರಲಿಲ್ಲವೆಂಬುದು ಅವತ್ತಿನ ಸಮಾಜದ ಅವತ್ತಿನ ವಾಸ್ತವ.

1922ರಲ್ಲಿ ಗುಬ್ಬಿ ಕಂಪೆನಿ ಚಿಕ್ಕಮಗಳೂರು ಕ್ಯಾಂಪಿನಲ್ಲಿದ್ದಾಗ ಶಿವರಾಮಕಾರಂತರು ರನ್ನನ ಗದಾಯುದ್ಧ ನಾಟಕವನ್ನು ಕೊಟ್ಟು "ಅದರಲ್ಲಿ ಹೆಂಗಸರು ಪಾತ್ರ ಮಾಡಕೂಡದೆಂಬ ನಿಬಂಧನೆ ಮಾಡಿದ್ದರು" ಎಂಬ ಪ್ರಸ್ತಾಪ ಕೂಡ ಇದೆ.[2]

ಹೀಗೆ ಸ್ತ್ರೀಪ್ರವೇಶದ ಕಲ್ಪನೆಯೇ ಪುರುಷಮನಸ್ಸುಗಳಿಗೆ ಒಪ್ಪಿತವಲ್ಲದ ವಿಷಯವಾಗಿದ್ದು ಸ್ತ್ರೀ ಪಾತ್ರಗಳನ್ನು ಮಾಡಲೆಂದೇ ಪುರುಷರು ಕೆಲವರು ಸದಾ ಸಿದ್ಧರಾಗಿರುತ್ತಿದ್ದ ಪಟ್ಟಿಯೇ ಇದೆ. "ಸ್ತ್ರೀ ಪಾತ್ರಗಳಲ್ಲಿ ಏಣಗಿ ಬಾಳಪ್ಪ, ನಾರಾಯಣ ನಾಯ್ಡು, ಬೋಧರಾವ್, ನಾಗೇಂದ್ರರಾಯರು ಮುಂತಾದವರಿದ್ದಾರೆ. ಇವರುಗಳ ಸ್ತ್ರೀ ಸಹಜವಾದ ಶೃಂಗಾರ ಹಾಗೂ ಬೆಡಗು ವೈಯಾರಗಳು ಜನರನ್ನು ಮೆಚ್ಚಿಸಿದವು. ಸ್ತ್ರೀಯರನ್ನೇ ಮೀರಿಸುವಂತಹ ಲಾವಣ್ಯದ ನಡಿಗೆ, ಬೆಡಗು, ನಯನ ಚಲನೆ, ನಿಲ್ಲುವ ಭಂಗಿ, ಹಸ್ತಚಲನೆ, ಲಜ್ಜೆಯ ಅಭಿವ್ಯಕ್ತಿ, ಸೆರಗನ್ನು ವೈಯಾರದಿಂದ ಸರಿಪಡಿಸುವ ಕೌಶಲ ಇವೇ ಮೊದಲಾದವುಗಳಿಂದ ತಾವು ವಹಿಸುತ್ತಿದ್ದ ಸ್ತ್ರೀ ಪಾತ್ರಗಳಿಗೆ ಸಹಜತೆಯನ್ನು ನೀಡುತ್ತಿದ್ದರು.[3] ಈ ಮೇಲಿನ ವಿಮರ್ಶೆಯನ್ನು ಸೂಕ್ಷ್ಮವಾಗಿ ಗಮನಿಸಿದಲ್ಲಿ ಮೇಲೆ ಹೇಳಿರುವ ಎಲ್ಲ ಗುಣವಿಶೇಷಣಗಳೂ ಹೆಣ್ಣೊಬ್ಬಳ ಬಾಹ್ಯಲೋಕಕ್ಕೆ ಸಂಬಂಧಪಟ್ಟವೇ ಹೊರತು ಅಂತರಂಗದ ಅವ್ಯಕ್ತ ಭಾವಗಳ ಬಗ್ಗೆ ಇಲ್ಲ ಎಂಬುದು ಮತ್ತೊಮ್ಮೆ ಗೋಚರವಾಗುತ್ತದೆ. ಈ ಮೇಲೆ ಹೇಳಿದ ಕಲಾವಿದರೆಲ್ಲರೂ ಅತ್ಯುತ್ತಮ ಕಲಾವಿದರು ಮತ್ತು ರಂಗಭೂಮಿಗೆ ಅದ್ಭುತ ಸಾಧನೆಗಳನ್ನು ನೀಡಿದವರು ಎಂಬ ವಿಷಯದಲ್ಲಿ ಯಾವ ತಕರಾರೂ ಇಲ್ಲ. ಆದರೆ ನಮ್ಮ ಪ್ರಶ್ನೆ ಇರುವುದು ಅವರ ಅಭಿವ್ಯಕ್ತಿ ಸಂಪೂರ್ಣ ಸ್ತ್ರೀ ಅಭಿವ್ಯಕ್ತಿಯಾಗಿದ್ದಿತೇ ಎಂಬುದರಲ್ಲಿ. ಇವರುಗಳು ಸ್ತ್ರೀ ಪಾತ್ರಗಳನ್ನು ಪ್ರಾಮಾಣಿಕವಾಗಿ ಘನತೆಯಿಂದಲೂ ನಟಿಸಿರಬಹುದು. ಆದರೆ ಸ್ತ್ರೀ ಪಾತ್ರಗಳನ್ನು ಆ ಕಾಲದಲ್ಲಿ ನಟಿಸುತ್ತಿದ್ದ ಎಲ್ಲ ನಟರೂ ಘನತೆ ಪೂರ್ವಕವಾಗಿಯೇ ಪಾತ್ರಗಳನ್ನು ಅಭಿವ್ಯಕ್ತಿಸುವುದಿರಲಿ, ನಿರ್ವಹಿಸಿಯೂ ಇಲ್ಲ. 'ಕಲೆಯೇ ಕಾಯಕ' ಆತ್ಮಚರಿತ್ರೆಯಲ್ಲಿ ಗುಬ್ಬಿವೀರಣ್ಣನವರೇ ಹೇಳಿರುವಂತೆ-ಹೆಣ್ಣು ಪಾತ್ರಗಳನ್ನು ಗಂಡಸರೇ ಅಭಿನಯಿಸುತ್ತಿದ್ದರು. ತಲೆಗೆ ಟೋಫನ್ ಹಾಕಿಕೊಂಡು ಸ್ತನಗಳಿಗೆ ಆಕಾರಕ್ಕೆ ತಕ್ಕಂತೆ ಬಟ್ಟೆಗಳನ್ನಿಟ್ಟುಕೊಳ್ಳುತ್ತಿದ್ದರು. ಅಭಿನಯಿಸುವಾಗ್ಗೆ ಅವು ಮೇಲೊಂದು ಕೆಳಗೊಂದರಂತೆ ಜಾಗ ಬದಲಾವಣೆಯಾಗಿ ಆಭಾಸವುಂಟಾಗುತ್ತಿದ್ದುದೂ ಉಂಟು. ಮಳೆಗಾಲದಲ್ಲಿ ಲ್ಯಾಂಪ್‌ನ ಕೆಳಗೆ ಬರುವ ಪತಂಗದ ಹುಳುಗಳು ರಾಣಿ ಪಾರ್ಟಿನವರು ಹಾಕಿಕೊಂಡಿದ್ದ ಟೋಫನ್‌ನೊಳಗೆ ತೂರಿ ಒಳಗೆ ಮುಲುಮುಲು ಓಡಾಡಿ, ರಾಣಿ ಪಾತ್ರಧಾರಿಯೂ ಈ ತೊಂದರೆಯನ್ನು ಸಹಿಸಿ ತಲೆ ಕೆರೆದುಕೊಂಡೇ ಮಾತನಾಡಬೇಕಾಗುತ್ತಿತ್ತು. ಅಲ್ಲದೆ ತಲೆಯೊಳಗೆ ಪತಂಗದ ಹುಳು ಮುಲುಗುಟ್ಟುತ್ತಿರುವಾಗ್ಗೆ ಪಾತ್ರಧಾರಿಯು ಮುಖವನ್ನು ಅಷ್ಟಾವಕ್ರ ಮಾಡಿಕೊಂಡು ಗಾಬರಿಯಾಗಿ ಹುಳುವಿನ ಹಿಂಸೆ ತಡೆಯಲಾರದೆ ತಲೆ ಕರೆದುಕೊಂಡು ಟೋಫನ್‌ಅನ್ನು ಹಿಂದೆ ಮುಂದೆ ಎಳೆಯುವಾಗ್ಗೆ ಅವನ ಕ್ಷೌರ ಮಾಡಿಸಿಕೊಂಡಿದ್ದ ಬೋಳು ತಲೆ ಕಂಡು ಜನಗಳು ನಕ್ಕು ಅಭಾಸವಾದುದೂ ಉಂಟು.[4] ಈ ರೀತಿಯ ಅನುಭವಗಳು ಹೆಚ್ಚು ಕಡಿಮೆ ಎಲ್ಲ ಕಂಪನಿಗಳಲ್ಲೂ ಇದ್ದವೆಂಬುದನ್ನು ಸುಲಭವಾಗಿ ಊಹಿಸಬಹುದಾಗಿದೆ. ಮತ್ತು ಯಾವ ಸ್ತ್ರೀ ಆಂಗಿಕಾಭಿನಯದ ಕಾರಣಕ್ಕೆ ಪ್ರೇಕ್ಷಾಂಗಣದಲ್ಲಿ ನಗೆ ಉಕ್ಕುವುದೋ ಅವನ್ನು ಮತ್ತೆ ಮತ್ತೆ ಮಾಡುತ್ತಾ ಅತಿರೇಕಕ್ಕೆ ತೆಗೆದುಕೊಂಡು ಹೋಗಿರುವ ಉದಾಹರಣೆಗಳನ್ನು ಕೇಳಿದ್ದೇವೆ. ಹೀಗೆ ಹೆಣ್ಣು ಪಾತ್ರಗಳು ಪ್ರೇಕ್ಷಕರಿಗೆ ತಮಾಷೆ ನೀಡುವಂತಹ ಪಾತ್ರಗಳಾಗಿ ಉಳಿದಿರುವ ಪ್ರಸಂಗಗಳೂ ಇವೆ. ಮೂಲಪಾತ್ರದ ಅಭಿವ್ಯಕ್ತಿಗಿಂತಲೂ ಮಜ ನೀಡಿ ಜನಪ್ರಿಯ ಗೊಳಿಸಿಕೊಳ್ಳಲು ಬೇಕಾದ ಚೇಷ್ಟೆಗಳನ್ನು ಅಭಿನಯಿಸುವುದರ ಮೂಲಕ ಹೆಣ್ಣಿನ ಘನತೆ ಗೌರವಗಳನ್ನು ನೆಲಕ್ಕಿಳಿಸಿಬಿಟ್ಟ ಇಂತಹ ಅಭಿವ್ಯಕ್ತಿ ಗಳಿಂದಲೇ ಸಮಾಜದಲ್ಲಿ ಹೆಣ್ಣಿನ ಬಗ್ಗೆ ಘನತೆ ಪೂರಿತ ಭಾವ ವ್ಯಕ್ತವಾಗದೆಯೂ ಹೋಗಿರಬಹುದು. ಒಟ್ಟಾರೆ ಅವತ್ತಿನ ಸಮಾಜದ ಸ್ಥಿತಿಗತಿಗಳಿಗೆ ಇಂತಹ ಅನುದ್ದೇಶಿತ ಕ್ರಿಯೆಗಳೂ ಪೂರಕವಾಗಿ ಹೆಣ್ಣಿನ ಬಗ್ಗೆಯೇ ಧೋರಣೆ ನಕಾರಾತ್ಮಕವಾಗಿ ಉಳಿದಿರುವುದಕ್ಕೂ ಸಾಧ್ಯವಿದೆ.

ಪಕ್ಕದ ಮಹಾರಾಷ್ಟ್ರದಲ್ಲಿ ಇಂತಹ ವಿಷಯಗಳ ಬಗ್ಗೆ ಸುದೀರ್ಘ ಚರ್ಚೆಗಳು ನಡೆದಿವೆ. 1912ರಲ್ಲಿ ನಡೆದ ರಂಗಭೂಮಿ ಸಮ್ಮೇಳನ ವೊಂದರಲ್ಲಿ ಮಧುರಾಬಾಯಿ ಎಂಬ ಕಲಾವಿದೆ ಪುರುಷರು ಸ್ತ್ರೀ ಪಾತ್ರಗಳನ್ನು ನಿರ್ವಹಿಸುವುದನ್ನು ಕುರಿತು – ಆ ಹಾವಭಾವ ಒಯ್ಯಾರ ಗಳೆಲ್ಲ ಅಸಹ್ಯವಾಗಿದೆ. ಯಾವ ಸ್ತ್ರೀಯೂ ಹಾಗೆ ವರ್ತಿಸುವುದಿಲ್ಲ ಎನ್ನುತ್ತಾರೆ. ಮತ್ತು ಆ ನಟರು ಕುತ್ತಿಗೆಯಿಂದ ತೀರ ಕೆಳಕ್ಕೆ ಇರುವ ರವಿಕೆಯನ್ನು ತೊಡುವುದಾಗಲೀ, ಕುಚ ಪ್ರದೇಶವನ್ನು ಅಸಭ್ಯವಾಗಿ ಎತ್ತಿ ತೋರಿಸುವಂತೆ ಸೆರಗು ಹಾಕುವುದಾಗಲೀ, ಮೈ ಕುಣಿಸುವುದಾಗಲೀ ಇವುಗಳನ್ನು ಒಂದು ಕೆಟ್ಟ ಅಣುಕು ಅನ್ನಬಹುದಲ್ಲದೆ ಅದು ಯಾವುದೇ ಬಗೆಯ ಸ್ತ್ರೀಯನ್ನು ಹೋಲುವುದಿಲ್ಲ ಎನ್ನುತ್ತಾರೆ. ಚಿಕ್ಕಪ್ರಾಯದ ಹುಡುಗರು ಪ್ರೌಢೆಯರ ಪಾತ್ರ ವಹಿಸುವುದು ಆ ಪಾತ್ರದ ಘನತೆಯನ್ನು ತುಂಬಿಕೊಡಲಾಗದೆ ಕೆಟ್ಟ ಪ್ರದರ್ಶನವಾಗುತ್ತದೆ ಮತ್ತು ಸ್ತ್ರೀಪಾತ್ರವೆಂದರೆ ಕೇವಲ ಮೋಹಕತೆ, ಪ್ರಚೋದಕ ಭಂಗಿ ಎಂದು ಭಾವಿಸುವುದು, ಆಭರಣಗಳನ್ನೆಲ್ಲ ಧರಿಸಿ ವೈಯ್ಯಾರ ಮಾಡಿದರೆ ಉತ್ತಮ ಸ್ತ್ರೀ ಪಾತ್ರ ನಿರ್ವಹಿಸಿದಂತೆ ಎಂದು ಭಾವಿಸುವ ಪುರುಷರ ಈ ಅಸಹ್ಯಕರ ವರ್ತನೆಯನ್ನು ಸ್ತ್ರೀಯರಂತೂ ಒಪ್ಪುವುದು ಸಾಧ್ಯವಿಲ್ಲ ಎನ್ನುತ್ತಾರೆ.[5]

ಇದೇ ಸಂದರ್ಭದಲ್ಲಿ ಹೇಳುವುದಾದರೆ, ಕರ್ನಾಟಕದ ಮೈಸೂರು ವಿಶ್ವವಿದ್ಯಾಲಯದಲ್ಲಿದ್ದ ಕನಕಲಕ್ಷ್ಮಮ್ಮ ಎಂ.ಎ. ಅವರು ರಂಗಭೂಮಿ ಪತ್ರಿಕೆಯಲ್ಲಿ ಪುರುಷರ ಸ್ತ್ರೀ ಅಭಿವ್ಯಕ್ತಿಯ ಬಗ್ಗೆ ಹೀಗೆ ಪ್ರತಿಕ್ರಿಯಿಸುತ್ತಾರೆ "...ಎಂದಾದರೂ ಪುರುಷನು ಸ್ತ್ರೀಯರ ವಿವಿಧ ಮನೋಭಾವಗಳನ್ನು ಅನುಭವಿಸಬಲ್ಲನೆ? ........ ನಿಜವಾಗಿಯೂ ಸ್ತ್ರೀಯು ಪ್ರೇಮಕಾಂತನ ದರ್ಶನದಿಂದ ಮೈಮರೆತು ಸ್ತಬ್ಧಳಾಗುವ ಸಂಭವವಿರುವುದೇ ವಿನಾ ಓರೆನೋಟಗಳಿಂದಲೂ, ಹುಬ್ಬನ್ನು ಹಾರಿಸುವುದರಿಂದಲೂ ತನ್ನ ಪ್ರೇಮವನ್ನು ಪ್ರಕಟಿಸುವುದಿಲ್ಲ.... ಇಂಥ ಪೊಳ್ಳು ಪ್ರೇಮದ ಅಭಿನಯ ದಿಂದಾಗಿ ಪೂಜ್ಯತೆಯು ಹಾಳಾಗಿ ಹೋಗಿದೆ. ನಾಟಕವನ್ನು, ನಾಟಕದಲ್ಲಿ ಪಾತ್ರ ವಹಿಸುವವರನ್ನು ತುಚ್ಛವಾಗಿ ಕಾಣುವುದು ಈ ಕಾರಣಕ್ಕಾಗಿಯೇ ಎಂದು ಅಭಿಪ್ರಾಯಪಡುತ್ತಾರೆ. ಅನೇಕ ಸ್ತ್ರೀಯರು ಕಲಾಭಿಮಾನಿಗಳಾಗಿ ಪಾತ್ರವನ್ನು ವಹಿಸುವುದಕ್ಕೆ ಸಿದ್ಧರೇ ಆಗಿದ್ದರೂ ಈ ವಿಧವಾದ

ರಂಗಸ್ಥಳದ ಅವಮಾನದಿಂದಾಗಿ ಎಲ್ಲರನ್ನೂ ಹಿಂದೆಳೆಯುತ್ತದೆ...." ಎಂದು ಚರ್ಚಿಸುತ್ತಾರೆ.[6]

ಸ್ತ್ರೀ ಪಾತ್ರಗಳ ರಚನೆಯ ಸಂದರ್ಭದಲ್ಲೂ ಅವು ಅವತ್ತಿನ ಆಯಾ ಸಾಮಾಜಿಕ ಪರಿಸ್ಥಿತಿಗೆ ಪೂರಕವಾಗುವಂತಹ ಆಯಾ ಕಾಲದ ಪುರುಷರು ತಮ್ಮ ತಮ್ಮ ದೃಷ್ಟಿಗಳಲ್ಲಿ ಸ್ತ್ರೀಯನ್ನು ಹೇಗಿರಬೇಕೆಂದು ಬಯಸುತ್ತಿದ್ದರೋ ಹಾಗೆ ರಚಿಸಲ್ಪಟ್ಟಿದ್ದವೇ ಹೊರತು ನಿಜವಾಗಿಯೂ ಸ್ತ್ರೀ ಇದ್ದ ಸ್ಥಿತಿಯಲ್ಲೇನೂ ಇಲ್ಲ.

1915ರಲ್ಲಿ ಇಂತಹ ಬಹಳಷ್ಟು ವಿಷಯಗಳ ಬಗ್ಗೆ ಚರ್ಚಿಸಲು ಮಹಾರಾಷ್ಟ್ರದಲ್ಲಿ ಸಂಘಟನೆಯೊಂದು ವೇದಿಕೆ ಸಿದ್ಧಪಡಿಸಿತು. ಅಲ್ಲಿಗೆ ಬಂದು ಚರ್ಚೆಯಲ್ಲಿ ಭಾಗವಹಿಸಲು, ಪ್ರತಿಕ್ರಿಯಿಸಲು, ಅಭಿಪ್ರಾಯಗಳನ್ನು ಹಂಚಿಕೊಳ್ಳುವುದಕ್ಕಾಗಿಯೇ ಕಲಾವಿದೆಯರಿಗೆಲ್ಲ ಆಹ್ವಾನವಿತ್ತರು. ಆದರೆ ಹೆಚ್ಚು ಜನ ಭಾಗವಹಿಸಲು ಹಿಂಜರಿದರು, ಕೆಲವರು ಸ್ಪಂದಿಸಿದರು. ಆ ಸಂದರ್ಭದಲ್ಲಿ ಯಮುನಾಬಾಯಿ ಎಂಬ ಕಲಾವಿದೆ ನೇರವಾಗಿ ನಾಟಕ ರಚನೆಯನ್ನು ಕುರಿತಂತೆ ಮಾತನಾಡುತ್ತಾರೆ. ಆಕೆಯ ಆಕ್ಷೇಪಣೆಗಳು ಗಂಭೀರವಾಗಿ ಪರಿಗಣಿಸಬೇಕಾದಂಥವಾಗಿವೆ. ಆ ದಿನಗಳಲ್ಲಿಯ ಅತ್ಯಂತ ಪ್ರಸಿದ್ಧ ನಾಟಕಕಾರ ಖಾಡಿಲ್ಕರ್. ಆದರೆ ಆತನ ಪಾತ್ರವನ್ನು ಸಮರ್ಥವಾಗಿ ರಂಗದ ಮೇಲೆ ಮೂಡಿಸುತ್ತಿದ್ದವರು ಬಾಲಗಂಧರ್ವರು. ಇವರೆಲ್ಲ ಪ್ರಶ್ನಾತೀತರು. ಆದರೆ ಯಮುನಾಬಾಯಿ ಹೀಗೆ ಹೇಳುತ್ತಾರೆ. ಪುರುಷ ಸ್ತ್ರೀಪಾತ್ರವನ್ನು ಸರಿಯಾಗಿ ಚಿತ್ರಿಸಲಾರ ಅದಕ್ಕೆ ಖಾಡಿಲ್ಕರ್ ಏನೂ ಅಪವಾದವಲ್ಲ. ಅವರ 'ಮೇನಕಾ' ನಾಟಕದಲ್ಲಿ ಸ್ತ್ರೀತ್ವಕ್ಕೆ, ಮಾತೃತ್ವಕ್ಕೆ ಅಪಮಾನ ಆಗುವಂಥ ರೀತಿಯಲ್ಲಿ ಸ್ತ್ರೀ ಸ್ವಭಾವ ಚಿತ್ರಿತವಾಗಿದೆ. ಮೇನಕೆ ವಿಶ್ವಾಮಿತ್ರನ ಬಳಿ ನನ್ನನ್ನು ನಿನ್ನ ಮಗುವಿನ ತಾಯಿಯಾಗುವಂತೆ ಅನುಗ್ರಹಿಸು ಎಂದು ಬೇಡಿಕೊಳ್ಳುವುದನ್ನು ಅತಿರೇಕ ಮಾಡಿ ಚಿತ್ರಿಸಲಾಗಿದೆ ಎನ್ನುತ್ತಾ ಎಲ್ಲ ಸ್ತ್ರೀಯರು ಮಾತೃತ್ವವನ್ನು ಅಪೇಕ್ಷಿಸುತ್ತಾರೆ. ಆದರೆ ಅದಕ್ಕಾಗಿ ಪುರುಷನ ಬಳಿ ಗೋಳಾಡಿ ಬೇಡುವುದಿಲ್ಲ. ಅದು ಅವಳ ಸ್ತ್ರೀತ್ವಕ್ಕೇ ಅಪಮಾನ. ಇದೆಲ್ಲ ಖಾಡಿಲ್ಕರ್‌ರಂಥ ಪುರುಷ ನಾಟಕಕಾರ ಹೇಗೆ ಅರ್ಥ ಮಾಡಿಕೊಳ್ಳಬಲ್ಲ ಎಂದು ಪ್ರಶ್ನಿಸುತ್ತಾರೆ.[7]

ಈ ಎಲ್ಲ ಉದಾಹರಣೆಗಳನ್ನು ಗಮನಿಸಿದಾಗ ಅವತ್ತಿನ ಸ್ತ್ರೀ ಪಾತ್ರಗಳ ರಚನೆ ಮತ್ತು ಅಭಿವ್ಯಕ್ತಿಯ ಬಗ್ಗೆ ಅವತ್ತಿನ ಕಲಾವಿದೆಯರಿಗೂ ತಕರಾರು, ಭಿನ್ನಾಭಿಪ್ರಾಯ ಮತ್ತು ಅಸಮಾಧಾನಗಳು ಇದ್ದವೆಂದು ಸ್ಪಷ್ಟವಾಗುತ್ತದೆ. ಅದನ್ನು ಧೈರ್ಯವಾಗಿ ಹೇಳುವಂತಹ ಆವರಣ ಸೃಷ್ಟಿ ಇಲ್ಲದಿರುವ ಕಾರಣ ನಮಗೆ ಬಹಳಷ್ಟು ಮಾಹಿತಿಗಳು ಇಂದಿಗೂ ದಕ್ಕದೆ ಹೋಗಿವೆ. ಕರ್ನಾಟಕದ ಮಟ್ಟಿಗಂತೂ ಈ ರೀತಿಯ ಯಾವ ಮುಕ್ತ ಚರ್ಚೆಗಳೂ ನಡೆದಿಲ್ಲವೆಂದಾದರೂ ಹಿಂಬದಿಯಲ್ಲಿ ಗೊಣಗುಟ್ಟಿದ ದಾಖಲೆಗಳೂ ಬೆಳಕಿಗೆ ಬಂದಿಲ್ಲ.

ಹೀಗೇ... ನಡೆದುಕೊಂಡು ಬರುತ್ತಿದ್ದ ರಂಗಭೂಮಿಗೆ ಸ್ತ್ರೀ ಪ್ರವೇಶದ ಅಗತ್ಯ ಮತ್ತು ಅನಿವಾರ್ಯತೆ ಗೋಚರವಾಗುತ್ತಾ ಹೋಯಿತು. ಕೆಲವರು ಆಗ ಸ್ತ್ರೀಪ್ರವೇಶದ ಬಗ್ಗೆ ತಮ್ಮ ನಿರ್ಧಾರಗಳನ್ನು ಸಡಿಲಿಸುತ್ತಾ ಹೋದರು. ಆದರೆ ಅಂತಹ ಯೋಚನೆಗಳಿಗೆ ತಡೆಯೊಡ್ಡುವ ಪಡೆಯೂ ನಿಂತಿತ್ತು. ಸಂಪ್ರದಾಯಬದ್ಧ ಸಮಾಜದ ಯಾವ ಸ್ತ್ರೀಯು ರಂಗಭೂಮಿಯ ಕಡೆ ತಿರುಗಿ ನೋಡುತ್ತಿರಲಿಲ್ಲ. ಅಂಥ ಸಂದರ್ಭದಲ್ಲಿ ನಾಯಕಸಾನಿಯರಿಗೆ ರಂಗಭೂಮಿಗೆ ಆಹ್ವಾನವಿತ್ತರು. ಅವರಾದರೋ ರಂಗಭೂಮಿಯನ್ನು ಜೀವನ ನಿರ್ವಹಣೆಯ ಮತ್ತೊಂದು ಅಂಗವಾಗಿ ಪರಿಗಣಿಸಿದರೇ ಹೊರತು ಕಲಾಭಿವ್ಯಕ್ತಿಗಾಗಿ ಅಲ್ಲ. ನಂತರ ವಿಧವೆಯರನ್ನು ಕರೆತರುವ ಬಗ್ಗೆ ಯೋಚನೆಗಳು ಮೂಡಿಬಂದವು. ಅವರಿಗೆ ತರಬೇತಿ ಕೊಟ್ಟು ರಂಗಪ್ರವೇಶ ಮಾಡಿಸುವುದು ಉತ್ತಮ ದಾರಿಯೆಂಬಂತೆ ಕಂಡುಕೊಂಡರು. ಜೊತೆಗೆ ವಿಧವೆಯರನ್ನು, ವೇಶ್ಯೆಯರನ್ನು ಉದ್ಧಾರ ಮಾಡುತ್ತಿದ್ದೇವೆಂಬ ಗರಿ ಇಟ್ಟುಕೊಳ್ಳುವ ಭ್ರಮೆಯಲ್ಲಿದ್ದರು. ವಾಸ್ತವ ಸಂಗತಿ ಬೇರೆಯೇ ಆಗಿತ್ತು. ಪ್ರೇಕ್ಷಕರು ಸ್ತ್ರೀಪಾತ್ರದ ಪುರುಷರನ್ನು ನಿರಾಕರಿಸಲು ಪ್ರಾರಂಭಿಸಿದ್ದರು. ಸ್ತ್ರೀ ಪಾತ್ರ ವಹಿಸುತ್ತಿದ್ದ ಪುರುಷರೆಲ್ಲರಿಗೂ ವಯಸ್ಸು ಮೀರುತ್ತಿತ್ತು. ಸ್ತ್ರೀ ವೇಷದಲ್ಲಿನ ಅಸಹಜತೆಗಳು ಪ್ರೇಕ್ಷಕರ ಗ್ರಹಿಕೆಗೆ ಗೋಚರವಾಗತೊಡಗಿದವು. ಪ್ರೇಕ್ಷಕನಿಗೆ ಸ್ತ್ರೀವೇಷದ ಪುರುಷರ ಅಭಿವ್ಯಕ್ತಿಯೇ ಎಲ್ಲವೂ ಅಲ್ಲ ಎಂಬುದು ಮನದಟ್ಟಾಗತೊಡಗಿತು. ಇಷ್ಟು ದಿನ ತಾವು ಕಂಡದ್ದು ಅಸಹಜವೆಂಬುದು ಅರ್ಥವಾಗತೊಡಗಿತ್ತು. ಸ್ತ್ರೀಯರು ಕೂಡ ಶಿಕ್ಷಣದಿಂದಾಗಿ ಬೆಳಕಿಗೆ ಬರುವಂತಾಗಿದ್ದರು. ಈ ಎಲ್ಲ ಕಾರಣಗಳಿಂದ ಸ್ತ್ರೀ ಪ್ರವೇಶ ರಂಗಭೂಮಿಗೆ ಅನಿವಾರ್ಯ ಎಂದು ಅನಿಸತೊಡಗಿತು. ಆದರೂ ಅವರನ್ನು ಸ್ವಾಗತಿಸಬೇಕೇ ಬೇಡವೇ ಎಂಬ ವಿಷಯದಲ್ಲಿ ಸಾಕಷ್ಟು ಚರ್ಚೆ ಭಿನ್ನಾಭಿಪ್ರಾಯ ಎಲ್ಲವೂ ಇತ್ತು.

ಕೊಣ್ಣೂರು ಶಿವಮೂರ್ತಿಸ್ವಾಮಿಗಳು ಒಮ್ಮೆ ಕೌಜಲಗಿ ನಿಂಗವ್ವ ಎಂಬ ಕಲಾವಿದೆಯ 'ಕೃಷ್ಣ ಪಾರಿಜಾತ' ಜಾನಪದ ಪ್ರಕಾರವನ್ನು ನೋಡಿ ಸ್ತ್ರೀ ಪಾತ್ರಗಳ ನಯ ನಾಜೂಕಿನ ಹಾವಭಾವಗಳಿಗೆ ಸಹಜತೆ ಬರುವುದು ಸ್ತ್ರೀಯರೇ ಅಭಿನಯಿಸಿದಾಗ ಮಾತ್ರ ಎಂಬ ತೀರ್ಮಾನಕ್ಕೆ ಬಂದವರೇ ಅದನ್ನು ತಮ್ಮ ಕಂಪನಿಯ ಇತರರೊಡನೆ ಪ್ರಸ್ತಾಪಿಸಿದಾಗ ಸ್ತ್ರೀ ಪಾತ್ರದ ಪುರುಷರು ತಮ್ಮ ಮಹತ್ವ ಕಡಿಮೆ ಆಗಬಹುದೆಂದು ಭಾವಿಸಿ ಸ್ತ್ರೀ ಪ್ರವೇಶವನ್ನು ತಡೆಯಲು ಬೇರೆ ಬೇರೆ ನೆಪಗಳನ್ನೊಡ್ಡಿದರು. ಕೌಟುಂಬಿಕ ಸ್ವಾಸ್ಥ್ಯ ಕೆಡಬಹುದು ಎಂದರು. ಅನೈತಿಕತೆ ತಲೆದೋರಬಹುದೆಂದರು. ಪುರುಷರು ಸ್ತ್ರೀ ಪಾತ್ರ ಮಾಡಿದರೆ 'ಕಲೆ' ಆಗುತ್ತದೆಯೇ ಹೊರತು ಸ್ತ್ರೀಯರೇ ಸ್ತ್ರೀ ಪಾತ್ರ ವಹಿಸಿದರೆ 'ಕಲೆ' ಆಗುವುದಿಲ್ಲ ಎಂಬಂತಹ ಅತಿರೇಕದ ಮಾತುಗಳನ್ನೂ ಕೆಲವರು ಬೇರೆ ಬೇರೆ ಸಂದರ್ಭಗಳಲ್ಲಿ ಆಡಿದ್ದಾರೆ. ಆದರೆ ಒಮ್ಮೆ ಪ್ರೇಕ್ಷಕರು ನಿರಾಕರಿಸಿಬಿಟ್ಟರೆ ಎಂಥವರೇ ಆದರೂ ತೆರೆ ಸರಿಯಲೇಬೇಕು. ಹಾಗಾಗಿ ರಂಗಭೂಮಿಯ ಉಳಿವಿಗಾಗಿ ಸ್ತ್ರೀ ಪ್ರವೇಶ ಅನಿವಾರ್ಯವೆನಿಸುವ ಸ್ಥಿತಿಗೆ ಬಂದು ತಲುಪಿದಾಗ ವೇಶ್ಯೆಯರು ಅಥವಾ ವಿಧವೆಯರು ಬರುವುದಾದರೆ ಅವರನ್ನು ಸೇರಿಸಿಕೊಳ್ಳಬಹುದು ಎಂಬ ಜಾಣ ತೀರ್ಮಾನಕ್ಕೆ ಬಂದರು. ಅಲ್ಲದೆ ಅವರನ್ನು ಉದ್ಧಾರ ಮಾಡುವ ನೀತಿ ಪಾಠಗಳೂ ಪ್ರಾರಂಭವಾದವು.

1903ನೇ ಇಸವಿಯಲ್ಲಿ ಶ್ರೀ ಚಂದಣ್ಣನವರು ತಮ್ಮ ಸಂಘಕ್ಕೆ ಹೊಳೆನರಸೀಪುರದ ಪಾರ್ವತಸಾನಿಯೆಂಬ ವೇಶ್ಯೆಯನ್ನು, ಆಕೆಯ ಕುಮಾರಿಯಾದ ಶೇಷಸಾನಿಯೆಂಬ ಹುಡುಗಿಯನ್ನೂ ಸೇರಿಸಿಕೊಂಡರು. ಪಾರ್ವತಸಾನಿಯನ್ನು ತಮ್ಮ ಉಪಪತ್ನಿಯನ್ನಾಗಿ ಮಾಡಿಕೊಂಡು ನಾಟಕಗಳಲ್ಲಿ ಪಾತ್ರ ವಹಿಸುವಂತೆ ತಯಾರಿ ಮಾಡಿದರು. ಅಲ್ಲಿಂದೀಚೆಗೆ ಅವರ ಸಂಘಕ್ಕೆ ಹೆಣ್ಣು ಮಕ್ಕಳು ಸೇರಲು ಪ್ರಾರಂಭಿಸಿದರು. ಹೊಳೆನರಸೀಪುರದಲ್ಲಿ ವೇಶ್ಯೆಯರ ಮನೆಗಳು ಹೆಚ್ಚಿಗೆ ಇದ್ದುದರಿಂದ ಅಲ್ಲಿಯವರೇ ನಾಲ್ಕು ಜನ ಹೆಂಗಸರು ಕಂಪನಿಗೆ ಸೇರಿಕೊಂಡ ದಾಖಲೆ ಗುಬ್ಬಿ ವೀರಣ್ಣನವರ 'ಕಲೆಯೇ ಕಾಯಕ' ಪುಸ್ತಕದಲ್ಲಿ ಕಂಡುಬರುತ್ತದೆ.

*(ಮುಂದುವರಿಯುವುದು)*

---

1. 'ಕನ್ನಡ ರಂಗಭೂಮಿಯ ವಿಕಾಸ' ಡಾ. ಎಚ್.ಕೆ. ರಾಮನಾಥ. ಪು. 148
2. 'ಕನ್ನಡ ರಂಗಭೂಮಿಯ ವಿಕಾಸ' ಡಾ. ಎಚ್.ಕೆ. ರಾಮನಾಥ. ಪು. 129
3. 'ಕನ್ನಡ ರಂಗಭೂಮಿಯ ವಿಕಾಸ' ಡಾ. ಎಚ್.ಕೆ. ರಾಮನಾಥ. ಪು. 140
4. 'ಕಲೆಯೇ ಕಾಯಕ' ಗುಬ್ಬಿ ವೀರಣ್ಣ
5. ಹೊಸತು ಮಾಸಪತ್ರಿಕೆ – ಡಾ. ವಿಜಯಾ
6. ಹೊಸತು ಮಾಸಪತ್ರಿಕೆ – ಡಾ. ವಿಜಯಾ
7. ಹೊಸತು ಮಾಸಪತ್ರಿಕೆ – ಡಾ. ವಿಜಯಾ

Registered with Registrar of Newspapers of India under No. KARKAN/2007/22289
'NAMMA MANASA', REGD. No. : MAG(3) NPP/399(A) / 2006-07 KA/BGS/2074/2010-12

# ನಮ್ಮ ಮಾನಸ

- ಮಹಿಳೆಯರಿಗೆ ಸಂಬಂಧಿಸಿದ ಲೇಖನಗಳು, ವರದಿಗಳು ವಿಶ್ಲೇಷಣೆಗಳು, ವಿಮರ್ಶೆಗಳು, ಅನುಭವಗಳು, ಕತೆ-ಕವನಗಳನ್ನು ನಮ್ಮ ಪತ್ರಿಕೆಯಲ್ಲಿ ಪ್ರಕಟಿಸಲಾಗಿದೆ.
- ಪತ್ರಿಕೆಯು ವಿಷಯಾಧರಿತವಾಗಿದ್ದು, ಪ್ರತ್ಯಕ್ಷವಾಗಿ ಹಾಗೂ ಪರೋಕ್ಷವಾಗಿ ಮಹಿಳೆಯರ ಬದುಕಿನ ಮೇಲೆ ಪರಿಣಾಮ ಬೀರುವ ಸಾಮಾಜಿಕ, ರಾಜಕೀಯ, ಆರ್ಥಿಕ ವಿಚಾರಗಳನ್ನು ಚರ್ಚಿಸಲಾಗಿದೆ.
- ವಿವಾಹ, ಕುಟುಂಬದಂತಹ ಸಾಮಾಜಿಕ ಸಂಸ್ಥೆಗಳು, ಮನೆಗೆಲಸ, ಸಂಬಳರಹಿತ ದುಡಿಮೆ, ಆರ್ಥಿಕ ನೀತಿ, ಜಾತಿ, ವರ್ಗ, ಸೌಂದರ್ಯ, ಲಿಂಗ, ಹೆಣ್ತನ ಮುಂತಾದ ವಿಷಯಗಳನ್ನು ಚರ್ಚೆಗೊಳಪಡಿಸಿ ಪ್ರಕಟಿಸಲಾಗಿದೆ. ಗುತ್ತಿಗೆ ಪೌರಕಾರ್ಮಿಕರ ಹೋರಾಟಗಳಿಗೆ ಸ್ಪಂದಿಸಿ ಲೇಖನಗಳನ್ನು ಪ್ರಕಟಿಸಿದೆ.
- ಆರೋಗ್ಯ, ಲೈಂಗಿಕತೆ, ಅಪಾಯಕಾರೀ ಗರ್ಭ ನಿರೋಧಕಗಳು, ಆರ್ಥಿಕತೆ ಮತ್ತು ಅಭಿವೃದ್ಧಿ, ಅಭಿವೃದ್ಧಿ ಯೋಜನೆಗಳು ಮುಂತಾದ ವಿಚಾರಗಳನ್ನು ವಿಮರ್ಶೆಗೊಳಪಡಿಸಲಾಗಿದೆ.
- ಅಣ್ವಸ್ತ್ರೀಕರಣ, ಮಿಲಿಟರೀಕರಣ, ಜಾಗತೀಕರಣದಂಥ ಬೆಳವಣಿಗೆಗಳನ್ನು ಮಹಿಳಾ ದೃಷ್ಟಿಕೋನದಿಂದ ಪ್ರಶ್ನಿಸಲಾಗಿದೆ.
- ಇತರ ಪ್ರಜಾಸತ್ತಾತ್ಮಕವಾದ ಸಂಘಟನೆಗಳೊಡನೆ ಕೋಮುವಾದ, ಸಮಾನ ನಾಗರಿಕ ಸಂಹಿತೆ, ಮೀಸಲಾತಿ, ಲೈಂಗಿಕತೆ, ಪರಿಸರ, ಸ್ಥಳಾಂತರ ಮುಂತಾದ ವಿವಾದಗಳನ್ನು ಕುರಿತ ಚರ್ಚೆಗಳಲ್ಲಿ, ಆಂದೋಲನಗಳಲ್ಲಿ ಪಾಲ್ಗೊಳ್ಳಲಾಗಿದೆ.
- ಸ್ವಸಹಾಯ ಸಂಘಗಳನ್ನು ರಚಿಸುವ ಮೂಲಕ ಮಹಿಳೆಯರ ಸಬಲತೆಗೆ ಪ್ರೋತ್ಸಾಹ ನೀಡಲಾಗಿದೆ.
- ನಮ್ಮದೇ ಮಿತಿಯಲ್ಲಿ ತೊಂದರೆಗೊಳಗಾದ ಮಹಿಳೆಯರಿಗೆ ಸಲಹೆ, ನೈತಿಕ ಬೆಂಬಲಗಳಲ್ಲದೆ ಕಾನೂನಿನ ನೆರವನ್ನು ನೀಡುತ್ತಿದ್ದೇವೆ.
- ಮಹಿಳೆಯರು ತಾವಿದ್ದೆಡೆಯಲ್ಲಿ ಮಹಿಳಾ ಪತ್ರಿಕೆಗಳನ್ನು ಹೊರತರಲು ಪ್ರಯತ್ನಿಸಿದಲ್ಲಿ, ಗುಂಪುಗಳನ್ನು ರಚಿಸಬೇಕಾದಲ್ಲಿ ಸಹಕರಿಸಲು ಉದ್ದೇಶಿಸಿದ್ದೇವೆ.

Registered Magazine

*Posted on 9th of every month at MBC, Bangalore GPO*
*Total No. of Pages: 24*

ವಿಳಾಸ :
ನಮ್ಮ ಮಾನಸ
114/5, 9ನೇ ತಿರುವು, 2ನೇ ಮುಖ್ಯರಸ್ತೆ,
ಚಾಮರಾಜಪೇಟೆ
ಬೆಂಗಳೂರು - 560 018